॥ ಶ್ರೀಹರಿಃ ॥

390▲

# ಗೀತಾ ಮಾಧುರ್ಯ

गीता-माधुर्य ( कन्नड )



गीताप्रेस गोरखपुर

GITA PRESS, GORAKHPUR

ಸ್ವಾಮಿ ರಾಮಸುಖದಾಸ

॥ ಶ್ರೀ ಹರಿಃ ॥

# ಗೀತಾಮಾಧುರ್ಯ

गीता–माधुर्य (कन्नड़)

ತ್ವಮೇವ ಮಾತಾ ಚ ಪಿತಾ ತ್ವಮೇವ
ತ್ವಮೇವ ಬಂಧುಶ್ಚ ಸಖಾ ತ್ವಮೇವ ।
ತ್ವಮೇವ ವಿದ್ಯಾ ದ್ರವಿಣಂ ತ್ವಮೇವ
ತ್ವಮೇವ ಸರ್ವಂ ಮಮ ದೇವದೇವ ॥

ಹಿಂದೀ ಮೂಲ ಲೇಖಕರು :
ಸ್ವಾಮೀ ರಾಮಸುಖದಾಸರು

ಪರಿಷ್ಕರಣೆ :
ಕೀರ್ತನಾಚಾರ್ಯ ಲಕ್ಷ್ಮಣದಾಸ್ ವೇಲಣಕರ್

॥ ಶ್ರೀ ಹರಿಃ ॥

# ನಮ್ರ ನಿವೇದನೆ

ಶ್ರೀಮದ್ಭಗವದ್ಗೀತೆಯು ಮನುಷ್ಯ ಮಾತ್ರರಿಗೆ ಸರಿಯಾದ ಮಾರ್ಗವನ್ನು ತೋರಿಸುವಂತಹ ಸಾರ್ವಭೌಮ ಮಹಾಗ್ರಂಥವಾಗಿದೆ. ಜನರಲ್ಲಿ ಹೆಚ್ಚು - ಹೆಚ್ಚಾಗಿ ಇದರ ಪ್ರಚಾರವಾಗಲಿ, ಎಂಬೀ ಉದ್ದೇಶದಿಂದ ಪರಮ ಶ್ರದ್ಧೇಯ ಸ್ವಾಮಿ ಶ್ರೀರಾಮ ಸುಖದಾಸರು ಈ ಗ್ರಂಥವನ್ನು ಪ್ರಶ್ನೋತ್ತರ ಶೈಲಿಯಲ್ಲಿ ಬಹು ಸರಳ ರೀತಿಯಲ್ಲಿ ಪ್ರಸ್ತುತಪಡಿಸಿದ್ದಾರೆ. ಆದರಿಂದ ಗೀತೆಯನ್ನು ಓದಲು ಸರ್ವೇಸಾಧಾರಣ ಜನರಲ್ಲಿ ಅಭಿರುಚಿ ಉಂಟಾಗಬಹುದು ಮತ್ತು ಅವರು ಇದರ ಅರ್ಥವನ್ನು ಸುಲಭವಾಗಿ ತಿಳಿದುಕೊಳ್ಳಬಲ್ಲರು. ನಿತ್ಯ ಪಾರಾಯಣ ಮಾಡುವುದಕ್ಕೂ ಸಹ ಈ ಪುಸ್ತಕ ಬಹಳ ಉಪಯುಕ್ತವಾಗಿದೆ.

ಈ ಪುಸ್ತಕವನ್ನು ಸ್ವತಃ ತಾವೂ ಓದಬೇಕು ಮತ್ತು ತಮ್ಮ ಮಿತ್ರರು, ಆಪ್ತ ಸಂಬಂಧಿಗಳು ಮುಂತಾದವರೂ ಸಹ ಓದುವಂತೆ ಪ್ರೇರಣೆ ಮಾಡಬೇಕು ಎಂಬುದೇ ಓದುಗರಲ್ಲಿ ನಮ್ಮ ನಿವೇದನೆ.

**– ಪ್ರಕಾಶಕರು**

॥ ಶ್ರೀ ಹರಿಃ ॥

# ವಿಷಯಾನುಕ್ರಮಣಿಕೆ

॥ ಓಂ ಶ್ರೀಪರಮಾತ್ಮನೇ ನಮಃ ॥

॥ಶ್ರೀಗಣೇಶಾಯ ನಮಃ॥

# ಗೀತಾ ಮಾಧುರ್ಯ

**ವಸುದೇವಸುತಂ ದೇವಂ ಕಂಸಚಾಣೂರಮರ್ದನಮ್ ।**
**ದೇವಕೀಪರಮಾನಂದಂ ಕೃಷ್ಣಂ ವಂದೇ ಜಗದ್ಗುರುಮ್ ॥**
**ಜಿಜ್ಞಾಸಾಪೂರ್ತಯೇ ಟೀಕಾ ಲಿಖಿತಾ ಸಾಧಕಸ್ಯ ಯಾ ।**
**ಸಂಜೀವನೀಪ್ರವೇಶಾಯ ಮಾಧುರ್ಯಂ ಲಿಖ್ಯತೇ ಮಯಾ ॥**

## ಮೊದಲನೇ ಅಧ್ಯಾಯವು

ಪಾಂಡವರು ಹನ್ನೆರಡು ವರ್ಷಗಳ ವನವಾಸ ಮತ್ತು ಒಂದು ವರ್ಷದ ಅಜ್ಞಾತವಾಸವನ್ನು ಮುಗಿಸಿದ ನಂತರ ಪೂರ್ವ ಪ್ರತಿಜ್ಞೆಗನುಸಾರವಾಗಿ ಅವರು ತಮ್ಮ ಅರ್ಧ ರಾಜ್ಯವನ್ನು ಕೇಳಿಕೊಂಡರು. ಆಗ ದುರ್ಯೋಧನನು ಅರ್ಧ ರಾಜ್ಯವೇನು, ಚೂಪಾದ ಸೂಜಿಯ ಮೊನೆಯಷ್ಟು ಭೂಮಿಯನ್ನೂ ಸಹ ಯುದ್ಧವಿಲ್ಲದೆ ಕೊಡಲು ಒಪ್ಪಲಿಲ್ಲ. ಆದುದರಿಂದ ಪಾಂಡವರು ತಾಯಿ ಕುಂತಿಯ ಆಜ್ಞೆಗನುಸಾರ ಯುದ್ಧಮಾಡುವುದನ್ನು ಒಪ್ಪಿಕೊಂಡರು. ಈ ಪ್ರಕಾರ ಪಾಂಡವರು ಮತ್ತು ಕೌರವರ ಮಧ್ಯೆ ಯುದ್ಧ ನಡೆಯುವುದು ನಿಶ್ಚಯವಾಯಿತು ಹಾಗೂ ಎರಡು ಕಡೆಗಳಲ್ಲಿಯೂ ಯುದ್ಧದ ಸಿದ್ಧತೆ ಪ್ರಾರಂಭವಾಯಿತು.

ಮಹರ್ಷಿ ವೇದವ್ಯಾಸರಿಗೆ ಧೃತರಾಷ್ಟ್ರನಲ್ಲಿ ಬಹಳ ಸ್ನೇಹವಿತ್ತು. ಆ ಸ್ನೇಹದ ಕಾರಣದಿಂದ ಅವರು ಧೃತರಾಷ್ಟ್ರನ ಬಳಿಗೆ ಬಂದು 'ಯುದ್ಧ ನಡೆಯುವುದು ಮತ್ತು ಅದರಲ್ಲಿ ಕ್ಷತ್ರಿಯರ ಮಹಾ ಸಂಹಾರ ಆಗಲೇಬೇಕಾಗಿದೆ. ಇದನ್ನು ಯಾರೂ ತಡೆಯಲಾರರು. ನೀನು ಯುದ್ಧವನ್ನು ನೋಡಲು ಇಚ್ಛೆಪಟ್ಟರೆ ನಾನು ನಿನಗೆ ದಿವ್ಯದೃಷ್ಟಿಯನ್ನು ಕೊಡುವೆನು. ಅದರಿಂದ ನೀನು ಇಲ್ಲಿಯೇ ಕುಳಿತುಕೊಂಡು ಯುದ್ಧವನ್ನು ಚೆನ್ನಾಗಿ ನೋಡಬಹುದು' ಎಂದು ಹೇಳಿದರು.

ಆದಕ್ಕೆ ಧೃತರಾಷ್ಟ್ರನು 'ನಾನು ಜನ್ಮವಿಡೀ ಕುರುಡನಾಗಿದ್ದೇ. ಈಗ ನನ್ನ ಕುಲದ ಸಂಹಾರವನ್ನು ನಾನು ನೋಡಲು ಇಚ್ಛಿಸುವುದಿಲ್ಲ. ಆದರೆ ಯುದ್ಧ ಹೇಗೆ ನಡೆಯುತ್ತಿದೆ - ಎಂಬೀ ಸಮಾಚಾರವನ್ನು ಅವಶ್ಯವಾಗಿ ತಿಳಿದುಕೊಳ್ಳಲು ಇಚ್ಛಿಸುತ್ತೇನೆ' ಎಂದು ಹೇಳಿದನು. ಆಗ ವ್ಯಾಸರು 'ನಾನು ಸಂಜಯನಿಗೆ ದಿವ್ಯದೃಷ್ಟಿ ಕೊಡುತ್ತೇನೆ, ಅದರಿಂದ ಪೂರ್ತಿಯಾಗಿ ಈ ಯುದ್ಧವನ್ನು, ಸಂಪೂರ್ಣವಾದ ಘಟನೆಗಳನ್ನು, ಸೈನಿಕರ ಮನಸ್ಸಿನಲ್ಲಿ ಉಂಟಾದ ವಿಚಾರಗಳನ್ನೂ ಸಹ

ತಿಳಿದುಕೊಳ್ಳುವನು, ಕೇಳಿಸಿಕೊಳ್ಳುವನು, ನೋಡಿಕೊಳ್ಳುವನು ಮತ್ತು ಎಲ್ಲಾ ಮಾತುಗಳನ್ನು ನಿನಗೆ ಹೇಳಲೂ ಬಲ್ಲನು' ಎಂದು ಹೇಳಿ ಸಂಜಯನಿಗೆ ದಿವ್ಯದೃಷ್ಟಿ ಕೊಟ್ಟರು. ಅಲ್ಲಿ ನಿಶ್ಚಿತ ಸಮಯಕ್ಕೆ ಅನುಸಾರವಾಗಿ ಕುರುಕ್ಷೇತ್ರದಲ್ಲಿ ಎರಡು ಸೈನ್ಯಗಳೂ ಯುದ್ಧಕ್ಕೆ ಸಿದ್ಧವಾಗಿದ್ದವು.

ಯುದ್ಧಕ್ಕೋಸ್ಕರ ಎರಡು ಸೈನ್ಯಗಳೂ ಸಿದ್ಧವಾಗಿದ್ದಾಗ, ಅಂತಹ ಸಂದರ್ಭದಲ್ಲಿ ಭಗವಂತನು ಅರ್ಜುನನಿಗೆ ಗೀತೆಯ ಉಪದೇಶವನ್ನು ಏಕೆ ಮಾಡಿದನು? - ಎಂಬ ಪ್ರಶ್ನೆಯೊಂದು ಇಲ್ಲಿ ಉದ್ಭವಿಸುತ್ತದೆ.

ಶೋಕವನ್ನು ನಾಶಪಡಿಸುವುದಕ್ಕಾಗಿಯೇ ಭಗವಂತನು ಅರ್ಜುನನಿಗೆ ಗೀತೋಪದೇಶ ಮಾಡಿದನು.

**ಅರ್ಜುನನಿಗೆ ಯಾವಾಗ ಶೋಕವುಂಟಾಯಿತು ಮತ್ತು ಏಕೆ?**

ಯಾವಾಗ ಅರ್ಜುನನು ಎರಡು ಸೈನ್ಯಗಳಲ್ಲಿಯೂ ತನ್ನ ಆತ್ಮೀಯ ಕುಟುಂಬಿಗಳನ್ನೇ ನೋಡಿದನೋ ಮತ್ತು ಎರಡು ಕಡೆಗಳಲ್ಲಿಯೂ ನಮ್ಮ ಕುಟುಂಬಿಗಳೇ ಸಾಯುವರು ಎಂದು ಯೋಚಿಸಿದನೋ, ಆಗ ಮಮತೆಯ ಕಾರಣದಿಂದ ಅವನಿಗೆ ಶೋಕವುಂಟಾಯಿತು.

**ಅರ್ಜುನನು ಎರಡು ಸೇನೆಗಳಲ್ಲಿಯೂ ತನ್ನ ಕುಟುಂಬದವರನ್ನು ಏಕೆ ನೋಡಿದ?**

ಭಗವಾನ್ ಶ್ರೀಕೃಷ್ಣನು ಎರಡು ಸೈನ್ಯಗಳ ಮಧ್ಯೆ ರಥವನ್ನು ನಿಲ್ಲಿಸಿ, ಯುದ್ಧದ ಇಚ್ಛೆಯುಳ್ಳವರಾಗಿ ಇಲ್ಲಿ ಸೇರಿರುವ ಈ ಕುರುವಂಶಸ್ಥರನ್ನು ನೀನು ನೋಡು ಎಂದು ಅರ್ಜುನನಿಗೆ ಹೇಳಿದನು. ಆಗ ಅರ್ಜುನನು ತನ್ನ ಕುಟುಂಬದವರನ್ನು ನೋಡಿದನು.

**ಭಗವಂತನು ಎರಡು ಸೈನ್ಯಗಳಲ್ಲಿರುವ ಕುರುವಂಶದವರನ್ನು ನೋಡುವಂತೆ ಅರ್ಜುನನಿಗೆ ಏಕೆ ಹೇಳಿದನು?**

ಅರ್ಜುನನು ಮೊದಲೇ ಭಗವಂತನೊಡನೆ ಹೀಗೆ ಹೇಳಿದ್ದನು - 'ಹೇ ಅಚ್ಯುತ! ಎರಡು ಸೈನ್ಯಗಳ ಮಧ್ಯೆ ನನ್ನ ರಥವನ್ನು ನಿಲ್ಲಿಸು. ಏಕೆಂದರೆ, ಇಲ್ಲಿ ನನ್ನ ಸಂಗಡ ಹೋರಾಡುವಂತಹವರು ಯಾರ್ಯಾರಿದ್ದಾರೆ? - ಎಂಬುದನ್ನು ನಾನು ನೋಡುವೆನು'.

**ಅರ್ಜುನ ಹಾಗೆ ಏಕೆ ಹೇಳಿದ?**

ಯುದ್ಧದ ಸಿದ್ಧತೆಯ ವಾದ್ಯಗಳು ಮೊಳಗಿದಾಗ ಉತ್ಸಾಹ ತುಂಬಿಬಂದು

ಅರ್ಜುನನು ಎರಡು ಸೈನ್ಯಗಳ ಮಧ್ಯದಲ್ಲಿ ರಥವನ್ನು ನಿಲ್ಲಿಸುವುದಕ್ಕಾಗಿ ಭಗವಂತನಿಗೆ ಹೇಳಿದನು.

**ವಾದ್ಯಗಳು ಏಕೆ ಮೊಳಗಿದವು?**

ಕೌರವರ ಸೈನ್ಯದ ಮುಖ್ಯ ಸೇನಾಪತಿ ಭೀಷ್ಮರು ಸಿಂಹದ ಗರ್ಜನೆಯಂತೆ ಗರ್ಜಿಸಿ ಶಂಖವನ್ನು ಊದಿದರು. ಆಗ ಕೌರವಸೇನೆಯ ವಾದ್ಯಗಳು ಮೊಳಗಿದವು ಹಾಗೂ ಪಾಂಡವರ ಸೈನ್ಯದ ವಾದ್ಯಗಳೂ ಸಹ ಮೊಳಗಿದವು.

**ಭೀಷ್ಮರು ಶಂಖವನ್ನು ಏಕೆ ಊದಿದರು?**

ದುರ್ಯೋಧನನನ್ನು ಸಂತೋಷಪಡಿಸುವುದಕ್ಕಾಗಿ ಭೀಷ್ಮರು ಶಂಖವನ್ನು ಊದಿದರು.

**ದುರ್ಯೋಧನ ಏಕೆ ಅಪ್ರಸನ್ನನಾಗಿದ್ದನು?**

ದುರ್ಯೋಧನನು ಗುರು ದ್ರೋಣಾಚಾರ್ಯರ ಹತ್ತಿರ ಹೋಗಿ – 'ನಿಮ್ಮ ಪ್ರತಿಪಕ್ಷದಲ್ಲಿ ಪಾಂಡವರ ಸೈನ್ಯವು ನಿಂತಿದೆ. ಅದನ್ನು ನೋಡಿ ಅರ್ಥಾತ್ ನೀವು ಪ್ರೇಮ–ಸ್ನೇಹಗಳನ್ನು ಇಟ್ಟುಕೊಂಡಿರುವ ಆ ಪಾಂಡವರೇ ನಿಮಗೆ ವಿರೋಧವಾಗಿ ನಿಂತಿದ್ದಾರೆ. ನಿಮ್ಮನ್ನು ಕೊಲ್ಲುವುದಕ್ಕಾಗಿಯೇ ಹುಟ್ಟಿರುವ ಧೃಷ್ಟದ್ಯುಮ್ನನ ಮೂಲಕವೇ ಪಾಂಡವಸೇನೆಯ ವ್ಯೂಹರಚನೆ ಸಹ ಮಾಡಲ್ಪಟ್ಟಿದೆ.' ಈ ರೀತಿ ಹೇಳಿದನು. ಈ ಪ್ರಕಾರ ದುರ್ಯೋಧನನ ಚತುರತೆಯಿಂದಲೂ, ರಾಜನೀತಿ ಯಿಂದಲೂ ತುಂಬಿರುವ ತೀಕ್ಷ್ಣವಾದ ಮಾತುಗಳನ್ನು ಕೇಳಿ ದ್ರೋಣಾಚಾರ್ಯರು ಸುಮ್ಮನಿದ್ದರು. ಏನೊಂದೂ ಮಾತನಾಡಲಿಲ್ಲ, ಇದರಿಂದ ದುರ್ಯೋಧನನು ಬೇಸರಗೊಂಡಿದ್ದನು.

**ದ್ರೋಣಾಚಾರ್ಯರು ಏಕೆ ಸುಮ್ಮನಿದ್ದರು?**

ದುರ್ಯೋಧನನು ದ್ರೋಣಾಚಾರ್ಯರನ್ನು ಪ್ರೇರೇಪಿಸುವುದಕ್ಕಾಗಿ ಚತುರತೆಯಿಂದ ಆಡಿದ ರಾಜನೀತಿಯ ಮಾತುಗಳು ಅವರಿಗೆ ಸರಿಯೆನಿಸಲಿಲ್ಲ. ನಾನು ಈ ಮಾತುಗಳನ್ನು ಖಂಡಿಸಿದರೆ, ಯುದ್ಧದ ಈ ಸಂದರ್ಭದಲ್ಲಿ ಪರಸ್ಪರ ವಾದ–ವಿವಾದ ಉಂಟಾಗುವುದು. ಅದು ಉಚಿತವಲ್ಲ; ನಾನು ಈ ಮಾತುಗಳನ್ನು ಅನುಮೋದಿಸಲಾರೆ, ಏಕೆಂದರೆ ಇವನು ಚತುರತೆಯಿಂದ ಮಾತನಾಡುತ್ತಿದ್ದಾನೆ, ಸರಳತೆಯಿಂದ ಮಾತನಾಡುತ್ತಾ ಇಲ್ಲ – ಎಂದು ಅವರು ಯೋಚಿಸಿದರು. ಆದುದರಿಂದ ದ್ರೋಣರು ಸುಮ್ಮನಿದ್ದರು.

**ದುರ್ಯೋಧನ ಅಂತಹ ಮಾತುಗಳನ್ನು ಯಾವಾಗ ಹೇಳಿದ ಮತ್ತು ಏಕೆ ಹೇಳಿದ?**

ವ್ಯೂಹಾಕಾರವಾಗಿ ನಿಂತಿರುವ ಪಾಂಡವರ ಸೈನ್ಯವನ್ನು ನೋಡಿ ದುರ್ಯೋಧನನು ಗುರು ದ್ರೋಣಾಚಾರ್ಯರನ್ನು ಪ್ರಚೋದಿಸುವ ಸಲುವಾಗಿ ಅಂತಹ ಮಾತನ್ನಾಡಿದನು. ಸಂಜಯನು ಧೃತರಾಷ್ಟ್ರನಿಗೆ ಅದರ ವರ್ಣನೆ ಮಾಡಿದನು.

**ಸಂಜಯನು ಈ ವರ್ಣನೆಯನ್ನು ಧೃತರಾಷ್ಟ್ರನಿಗೆ ಮಾಡಿದುದೇಕೆ?**

ಧೃತರಾಷ್ಟ್ರನು ಯುದ್ಧದ ಕಥೆಯನ್ನು (ಸ್ಥಿತಿಯನ್ನು) ಪ್ರಾರಂಭದಿಂದ ವಿಸ್ತಾರವಾಗಿ ಕೇಳಲು ಇಚ್ಛಿಸಿದನು. ಆಗ ಸಂಜಯನು ಈ ಮಾತುಗಳನ್ನೆಲ್ಲಾ ಧೃತರಾಷ್ಟ್ರನಿಗೆ ಹೇಳಿದನು.

**ಧೃತರಾಷ್ಟ್ರನು ಸಂಜಯನಿಂದ ಏಕೆ ಕೇಳಲಿಚ್ಛಿಸಿದ?**

ಹತ್ತು ದಿವಸಗಳ ಯುದ್ಧವಾದ ನಂತರ ಸಂಜಯನು ಅಕಸ್ಮಾತ್ ಧೃತರಾಷ್ಟ್ರನಲ್ಲಿಗೆ ಬಂದು - 'ಕೌರವರ ಮತ್ತು ಪಾಂಡವರ ಪಿತಾಮಹರಾದ ಶಂತನು ನಂದನ ಭೀಷ್ಮರು ಕೊಲ್ಲಲ್ಪಟ್ಟರು (ರಥದಿಂದ ಬೀಳಿಸಲ್ಪಟ್ಟರು). ಅವರು ಯೋಧರುಗಳಲ್ಲಿ ಮುಖ್ಯರು ಮತ್ತು ಧನುರ್ಧಾರಿಗಳಲ್ಲಿ ಶ್ರೇಷ್ಠರಾಗಿದ್ದರು. ಅಂತಹ ಪಿತಾಮಹ ಭೀಷ್ಮರು ಇಂದು ಶರ-ಶಯ್ಯೆಯ ಮೇಲೆ ಮಲಗಿದ್ದಾರೆ' ಎಂದು ಹೇಳಿದನು. ಈ ಸಮಾಚಾರವನ್ನು ಕೇಳಿ ಧೃತರಾಷ್ಟ್ರನಿಗೆ ಬಹಳ ದುಃಖವಾಯಿತು ಮತ್ತು ಆತನು ಶೋಕಪಡಲಾರಂಭಿಸಿದನು. ನಂತರ ಆತನು ಯುದ್ಧದ ವೃತ್ತಾಂತವನ್ನೆಲ್ಲಾ ತಿಳಿಸುವಂತೆ ಸಂಜಯನಲ್ಲಿ ಕೇಳಿದನು.

**'ಹೇ ಸಂಜಯ! ಧರ್ಮಭೂಮಿಯಾದ ಕುರುಕ್ಷೇತ್ರದಲ್ಲಿ ಯುದ್ಧಾಪೇಕ್ಷೆಯಿಂದ ನೆರೆದಿರುವ ನನ್ನ ಮತ್ತು ಪಾಂಡುವಿನ ಪುತ್ರರು ಏನು ಮಾಡಿದರು? ॥೧॥**

ಸಂಜಯನು ಹೇಳಿದನು - ಆಗ ವ್ಯೂಹ-ರಚನೆಯೊಡನೆ ನಿಂತಿರುವ ಪಾಂಡವರ ಸೈನ್ಯವನ್ನು ನೋಡಿ ರಾಜಾ ದುರ್ಯೋಧನನು ದ್ರೋಣಾಚಾರ್ಯರ ಬಳಿಗೆ ಹೋಗಿ ಅವರಲ್ಲಿ - 'ಆಚಾರ್ಯರೇ, ಬುದ್ಧಿವಂತನಾದ ನಿಮ್ಮ ಶಿಷ್ಯ ದ್ರುಪದಪುತ್ರ ಧೃಷ್ಟದ್ಯುಮ್ನನಿಂದ ವ್ಯೂಹಾಕಾರದಲ್ಲಿ ನಿಲ್ಲಿಸಲಾಗಿರುವ ಪಾಂಡವರ ಈ ದೊಡ್ಡ ಸೈನ್ಯವನ್ನು ನೋಡಿರಿ' - ಎಂದು ಹೇಳಿದನು ॥೨-೩॥

**ದುರ್ಯೋಧನ ! ಪಾಂಡವರ ಸೈನ್ಯದಲ್ಲಿ ನಾನು ಯಾರು ಯಾರನ್ನು ನೋಡಲಿ?**

ಪಾಂಡವರ ಈ ಸೇನೆಯಲ್ಲಿ ದೊಡ್ಡ-ದೊಡ್ಡ ಶೂರವೀರರಿದ್ದಾರೆ. ಅವರಲ್ಲಿ

ಬಹಳ ದೊಡ್ಡ-ದೊಡ್ಡ ಧನುಸ್ಸುಗಳಿವೆ ಹಾಗೂ ಅವರು ಬಲದಲ್ಲಿ ಭೀಮನಿಗೆ ಸಮಾನರೂ ಮತ್ತು ಯುದ್ಧಕಲೆಯಲ್ಲಿ ಅರ್ಜುನನಿಗೆ ಸಮಾನರೂ ಆಗಿದ್ದಾರೆ. ಇವರುಗಳಲ್ಲಿ ಯುಯುಧಾನ (ಸಾತ್ಯಕಿ), ರಾಜಾ ವಿರಾಟ ಮತ್ತು ಮಹಾರಥಿ ದ್ರುಪದರೂ ಸಹ ಇದ್ದಾರೆ. ಧೃಷ್ಟಕೇತು, ಚೇಕಿತಾನ ಮತ್ತು ಪರಾಕ್ರಮೀ ಕಾಶಿರಾಜ ಇವರೂ ಇದ್ದಾರೆ. ಪುರುಜಿತ್ ಮತ್ತು ಕುಂತಿಭೋಜ - ಈ ಇಬ್ಬರು ಸಹೋದರರು ಹಾಗೂ ಮನುಷ್ಯರಲ್ಲಿ ಶ್ರೇಷ್ಠನಾದ ಶೈಬ್ಯ ಸಹ ಇದ್ದಾರೆ. ಪರಾಕ್ರಮೀ ಯುಧಾಮನ್ಯು ಮತ್ತು ಬಲಶಾಲೀ ಉತ್ತಮೌಜಾ ಸಹ ಇದ್ದಾರೆ. ಸುಭದ್ರಾಪುತ್ರ ಅಭಿಮನ್ಯು ಮತ್ತು ದ್ರೌಪದಿಯ ಐವರು ಪುತ್ರರೂ ಇದ್ದಾರೆ. ಇವರೆಲ್ಲರೂ ಮಹಾರಥಿಗಳೇ ಆಗಿದ್ದಾರೆ ॥೪-೬॥

**ದುರ್ಯೋಧನಾ! ಪಾಂಡವರ ಸೇನೆಯ ಶೂರವೀರರ ಹೆಸರುಗಳನ್ನೇನೋ ನೀನು ತಿಳಿಸಿದೆ, ಆದರೆ ನಮ್ಮ ಸೈನ್ಯದ ಶೂರವೀರರು ಯಾರು ಯಾರು ಇದ್ದಾರೆ?**

ಹೇ ದ್ವಿಜೋತ್ತಮರೇ! ನಮ್ಮ ಸೇನೆಯ ವಿಶೇಷ ಪುರುಷರ ಬಗ್ಗೆಯೂ ಸಹ ಗಮನಕೊಡಿರಿ. ದ್ರೋಣಾಚಾರ್ಯರಾದ ನೀವು, ಪಿತಾಮಹ ಭೀಷ್ಮರು, ಕರ್ಣ, ಸಂಗ್ರಾಮವಿಜಯೀ ಕೃಪಾಚಾರ್ಯರು, ಅಶ್ವತ್ಥಾಮ, ವಿಕರ್ಣ ಮತ್ತು ಸೋಮದತ್ತನ ಮಗ ಭೂರಿಶ್ರವಾ ಹಾಗೂ ಇವರಲ್ಲದೆ ಇನ್ನೂ ಸಹ ಬಹಳಷ್ಟು ಶೂರವೀರರಿದ್ದಾರೆ. ಅವರು ನನಗೋಸ್ಕರ ತಮ್ಮ ಜೀವದ ಹಂಗನ್ನೇ ತ್ಯಜಿಸಿಬಿಟ್ಟಿದ್ದಾರೆ. ಮತ್ತು ಅವರು ಅನೇಕ ಪ್ರಕಾರದ ಅಸ್ತ್ರ-ಶಸ್ತ್ರಗಳ ಪ್ರಯೋಗದಲ್ಲಿ ನಿಪುಣರು ಹಾಗೂ ಯುದ್ಧಕಲೆಯಲ್ಲಿ ಅತ್ಯಂತ ಚತುರರಾಗಿದ್ದಾರೆ ॥೭-೯॥

**ಸಂಜಯಾ! ಎರಡೂ ಸೈನ್ಯಗಳ ಮುಖ್ಯ-ಮುಖ್ಯ ಯೋಧರುಗಳನ್ನು ತೋರಿಸಿದ ನಂತರ ದುರ್ಯೋಧನನು ಏನು ಮಾಡಿದನು?**

ಉಭಯಪಕ್ಷಪಾತೀ (ಎರಡು ಪಕ್ಷಗಳನ್ನು ವಹಿಸುವವರು) ಭೀಷ್ಮರ ಮೂಲಕ ರಕ್ಷಿತವಾದ ನಮ್ಮ ಸೇನೆಯು ಪಾಂಡವರ ಸೇನೆಯ ಮೇಲೆ ವಿಜಯ ಸಾಧಿಸಲು ಅಸಮರ್ಥವಾಗಿದೆ ಮತ್ತು ಸ್ವಂತಪಕ್ಷಪಾತಿಯಾದ (ಕೇವಲ ತನ್ನ ಪಕ್ಷವನ್ನೇ ವಹಿಸುವ) ಭೀಮನ ಮೂಲಕ ರಕ್ಷಿತವಾದ ಪಾಂಡವರ ಸೇನೆಯು ನಮ್ಮ ಸೇನೆಯ ಮೇಲೆ ವಿಜಯ ಸಾಧಿಸಲು ಸಮರ್ಥವಾಗಿದೆ ಎಂದು ದುರ್ಯೋಧನನು ತನ್ನ ಮನಸ್ಸಿನಲ್ಲಿ ಯೋಚಿಸಿದನು ॥೧೦॥

**ಮನಸ್ಸಿನಲ್ಲಿ ಹಾಗೆ ಆಲೋಚಿಸಿದ ನಂತರ ದುರ್ಯೋಧನನು ಏನು ಮಾಡಿದನು?**

ಅವನು ಎಲ್ಲಾ ವೀರರಿಗೂ - 'ನೀವುಗಳೆಲ್ಲರೂ ನಿಮ್ಮ-ನಿಮ್ಮ ಆಯಕಟ್ಟಿನ

ಸುರಕ್ಷಿತ ಸ್ಥಳದಲ್ಲಿ ಸಜ್ಜಾಗಿ ಸ್ಥಿರವಾಗಿರುತ್ತಾ ಪಿತಾಮಹ ಭೀಷ್ಮರನ್ನು ನಾಲ್ಕೂ ಕಡೆಗಳಿಂದಲೂ ರಕ್ಷಣೆ ಮಾಡಿ* - ಎಂದು ಹೇಳಿದನು.

**ತಮ್ಮ ರಕ್ಷಣೆಯ ಮಾತನ್ನು ಕೇಳಿ ಭೀಷ್ಮರು ಏನು ಮಾಡಿದರು?**

ಪಿತಾಮಹ ಭೀಷ್ಮರು ದುರ್ಯೋಧನನನ್ನು ಪ್ರಸನ್ನಪಡಿಸುತ್ತಾ ಸಿಂಹದ ಹಾಗೆ ಗರ್ಜಿಸಿ ಬಹಳ ಬಲವಾಗಿ ಶಂಖವನ್ನು ಊದಿದರು ॥೧೨॥

**ಭೀಷ್ಮರು ಶಂಖವನ್ನು ಊದಿದ ನಂತರ ಏನಾಯಿತು ಸಂಜಯ?**

ಭೀಷ್ಮರೇನೋ ದುರ್ಯೋಧನನನ್ನು ಸಂತೋಷಪಡಿಸುವುದಕ್ಕಾಗಿಯೇ ಶಂಖವನ್ನು ಊದಿದ್ದರು. ಆದರೆ ಕೌರವಸೇನೆಯು ಇದನ್ನು ಯುದ್ಧಾರಂಭದ ಘೋಷಣೆಯೆಂದೇ ತಿಳಿದುಕೊಂಡಿತು. ಆದುದರಿಂದ ಭೀಷ್ಮರು ಶಂಖವನ್ನು ಊದಿದ ಕೂಡಲೇ ಕೌರವ ಸೇನೆಯ ಶಂಖ, ಭೇರಿ, ಡೋಲು, ಮೃದಂಗ ಮೊದಲಾದ ವಾದ್ಯಗಳು ಒಂದೇ ಸಾರಿ ಒಟ್ಟಿಗೆ ಮೊಳಗಿದವು. ಅವುಗಳ ಶಬ್ದ ಬಹು ಭಯಂಕರವಾಗಿತ್ತು ॥೧೩॥

**ಸಂಜಯ! ಕೌರವಸೇನೆಯ ವಾದ್ಯಗಳು ಮೊಳಗಿದನಂತರ ಏನಾಯಿತು?**

ಕೌರವಸೇನೆಯ ವಾದ್ಯಗಳು ಮೊಳಗಿದನಂತರ ಪಾಂಡವಸೇನೆಯ ವಾದ್ಯಗಳು ಮೊಳಗಬೇಕಾಗಿತ್ತು. ಆದರೆ ಆ ಸೈನ್ಯಕ್ಕೆ ಯಾವ ಆಜ್ಞೆಯೂ ಸಿಕ್ಕಲಿಲ್ಲ. ಆಗ ಬಿಳಿಯ ಕುದುರೆಗಳಿಂದ ಕೂಡಿದ ಮಹಾನ್ ರಥದಲ್ಲಿ ಕುಳಿತ ಭಗವಾನ್ ಶ್ರೀಕೃಷ್ಣನು 'ಪಾಂಚಜನ್ಯ' ಮತ್ತು ಅರ್ಜುನನು 'ದೇವದತ್ತ' ಎಂಬ ದಿವ್ಯ ಶಂಖಗಳನ್ನು ಬಹಳ ಗಟ್ಟಿಯಾಗಿ ಊದಿದರು. ಅನಂತರ ಭೀಮನು 'ಪೌಂಡ್ರ' ಎಂಬ, ಯುಧಿಷ್ಠಿರನು 'ಅನಂತವಿಜಯ' ಎಂಬ, ನಕುಲನು 'ಸುಘೋಷ' ಎಂಬ ಮತ್ತು ಸಹದೇವನು 'ಮಣಿಪುಷ್ಪಕ' ಎಂಬ ಬೇರೆ-ಬೇರೆ ಶಂಖಗಳನ್ನು ಊದಿದರು ॥೧೪-೧೬॥

**ಮತ್ತೆ ಯಾರು ಶಂಖ ಊದಿದರು?**

ಎಲೈ ರಾಜಾ ! ಪುನಃ ಪಾಂಡವಸೇನೆಯ ಶ್ರೇಷ್ಠ ಧನುರ್ಧಾರಿಗಳಾದ ಕಾಶಿರಾಜ, ಮಹಾರಥಿ ಶಿಖಂಡಿ ಹಾಗೂ ಧೃಷ್ಟದ್ಯುಮ್ನ, ರಾಜಾ ವಿರಾಟ, ಅಜೇಯನಾದ ಸಾತ್ಯಕಿ, ರಾಜಾ ದ್ರುಪದ, ದ್ರೌಪದಿಯ ಐವರು ಪುತ್ರರು ಮತ್ತು

---

* ದ್ರೋಣರು ಮತ್ತು ಭೀಷ್ಮರು ಉಭಯಪಕ್ಷಪಾತಿಯೆಂದು ದುರ್ಯೋಧನನು ತಿಳಿದಿದ್ದನು. ಆದುದರಿಂದ ಅವರನ್ನು ಒಪ್ಪಿಸಿ ತನ್ನ ಪಕ್ಷದ ವಶಕ್ಕೆ ಸೇರಿಸಿಕೊಳ್ಳಲು ದುರ್ಯೋಧನ ಮೊದಲು ದ್ರೋಣಾಚಾರ್ಯರ ಹತ್ತಿರಕ್ಕೆ ಹೋಗಿದ್ದನು. ಹಾಗೆಯೇ ಈಗ ಇಲ್ಲಿ ಭೀಷ್ಮನನ್ನು ಒಪ್ಪಿಸುವುದಕ್ಕಾಗಿಯೇ ಎಲ್ಲಾ ವೀರರಿಗೂ ಭೀಷ್ಮರನ್ನು ರಕ್ಷಣೆ ಮಾಡುವಂತೆ ಹೇಳುತ್ತಿದ್ದಾನೆ.

ಸುಭದ್ರೇಯ ಮಗ ಮಹಾಬಾಹು ಅಭಿಮನ್ಯು - ಈ ಎಲ್ಲಾ ಮಹಾರಥಿಗಳು ತಮ್ಮ-ತಮ್ಮ ಶಂಖಗಳನ್ನು ಊದಿದರು ॥೧೭-೧೮॥

**ಪಾಂಡವರ ಸೈನ್ಯದ ಆ ಶಂಖಧ್ವನಿಯಿಂದ ಏನು ಪರಿಣಾಮ ಉಂಟಾಯಿತು?**

ಪಾಂಡವರ ಸೈನ್ಯದ ಶಂಖಗಳ ಆ ಭಯಂಕರ ಧ್ವನಿಯು ಆಕಾಶ ಮತ್ತು ಭೂಮಿಯನ್ನು ಮೊಳಗಿಸುತ್ತಾ, ಅನ್ಯಾಯವಾಗಿ ರಾಜ್ಯವನ್ನು ಕಿತ್ತುಕೊಂಡಿರುವ ಕೌರವರ ಹೃದಯವನ್ನು ನಡುಗಿಸಿತು ॥೧೯॥

**ಸಂಜಯ! ಶಂಖವನ್ನು ಊದಿದ ನಂತರ ಪಾಂಡವರು ಏನು ಮಾಡಿದರು?**

ಹೇ ಮಹೀಪತಿಯೇ! ಶಂಖಗಳು ಮೊಳಗಿದ ನಂತರ ಯುದ್ಧ ಪ್ರಾರಂಭವಾಗುವ ಸಮಯದಲ್ಲಿ ನಿಮ್ಮ ಸಂಬಂಧಿಗಳನ್ನು (ಕೌರವರನ್ನು) ನೋಡಿ ಕಪಿಧ್ವಜವುಳ್ಳ ಅರ್ಜುನನು ತನ್ನ ಗಾಂಡೀವ ಧನುಸ್ಸನ್ನು ಎತ್ತಿಕೊಂಡನು ಮತ್ತು ಅಂತರ್ಯಾಮೀ ಭಗವಾನ್ ಶ್ರೀಕೃಷ್ಣನೊಡನೆ - ಹೇ ಅಚ್ಯುತ ! ನೀನು ನನ್ನ ರಥವನ್ನು ಎರಡು ಸೈನ್ಯಗಳ ಮಧ್ಯೆ ನಿಲ್ಲಿಸಿಬಿಡು - ಎಂದು ಹೇಳಿದನು ॥೨೦-೨೧॥

**ಅರ್ಜುನ! ರಥವನ್ನು ಮಧ್ಯದಲ್ಲಿ ಏಕೆ ನಿಲ್ಲಿಸಲಿ?**

ನಾನು ಯಾರು-ಯಾರೊಡನೆ ಯುದ್ಧ ಮಾಡಬೇಕಾಗಿದೆ - ಎಂಬುದಕ್ಕಾಗಿ ಈ ರಣಭೂಮಿಯಲ್ಲಿ ನಿಂತುಕೊಂಡಿರುವ ಯುದ್ಧಾಪೇಕ್ಷಿಗಳಾದ ಶೂರವೀರರನ್ನು ನೋಡಿಕೊಳ್ಳುವೆನು. ಇಲ್ಲಿ ಯುದ್ಧದಲ್ಲಿ ದುರ್ಯೋಧನನಿಗೆ ಪ್ರಿಯವಾದುದನ್ನೇ ಮಾಡುವ ಇಚ್ಛೆಯಿಂದ ಸೇರಿರುವ ರಾಜರುಗಳನ್ನೂ ಸಹ ನಾನು ನೋಡಿಕೊಳ್ಳುವೆನು'' ॥೨೨-೨೩॥

**ಸಂಜಯ! ಅರ್ಜುನನು ಹೀಗೆ ಹೇಳಿದಮೇಲೆ ಭಗವಂತ ಏನು ಮಾಡಿದನು?**

ಸಂಜಯ ಹೇಳಿದನು - ''ಎಲೈ ಮಹಾರಾಜ! ನಿದ್ರೆಯನ್ನು ಜಯಿಸಿದ ಅರ್ಜುನನು ಹಾಗೆ ಹೇಳಿದನಂತರ ಅಂತರ್ಯಾಮಿ ಭಗವಾನ್ ಶ್ರೀಕೃಷ್ಣನು ಎರಡು ಸೈನ್ಯಗಳ ಮಧ್ಯಭಾಗದಲ್ಲಿ ಪಿತಾಮಹ ಭೀಷ್ಮರು ಮತ್ತು ಆಚಾರ್ಯ ದ್ರೋಣರ ಎದುರಿಗೆ ಹಾಗೂ ಎಲ್ಲಾ ರಾಜರುಗಳ ಮುಂದೆ ರಥವನ್ನು ನಿಲ್ಲಿಸಿ - 'ಹೇ ಪಾರ್ಥ! ಇಲ್ಲಿ ನೆರೆದಿರುವ ಈ ಕುರುವಂಶೀಯರನ್ನು ನೋಡು' ಎಂದು ಹೇಳಿದನು ॥೨೪-೨೫॥

**ಭಗವಂತನು ಹೀಗೆ ಹೇಳಿದ ನಂತರ ಏನಾಯಿತು ?**

ಆಗ ಅಲ್ಲಿ ಎರಡು ಸೈನ್ಯಗಳಲ್ಲಿದ್ದ ಪಿತಾ, ಪಿತಾಮಹರು, ಆಚಾರ್ಯರು,

ಸೋದರಮಾವಂದಿರು, ಸಹೋದರರು, ಪುತ್ರರು, ಮೊಮ್ಮಕ್ಕಳು ಹಾಗೂ ಮಿತ್ರರು, ಮಾವಂದಿರು ಮತ್ತು ಸಹೃದಯಿಗಳು ಹಾಗೂ ಇವರುಗಳೇ ಅಲ್ಲದೆ ಬೇರೆ ಅನೇಕ ಮಂದಿ ಸಂಬಂಧಿಗಳನ್ನು ನೋಡಿ ಅರ್ಜುನನು ಅತ್ಯಂತ ಹೇಡಿತನದಿಂದ ವಿಷಾದಪಡುತ್ತಾ ಹೇಳಿದನು.

**ಅರ್ಜುನನು ಏನು ಹೇಳಿದ ಸಂಜಯ?**

ಅರ್ಜುನ ಹೀಗೆ ಹೇಳಿದನು – 'ಹೇ ಕೃಷ್ಣ! ನನ್ನ ಆತ್ಮೀಯ ಕುಟುಂಬಿಗಳು ಯುದ್ಧಕ್ಕಾಗಿ ಎದುರಿಗೆ ನಿಂತಿರುವುದನ್ನು ನೋಡಿ ನನ್ನ ಅಂಗಾಂಗಗಳೆಲ್ಲಾ ಬಳಲಿ ಹೋಗುತ್ತಾ ಇವೆ. ಬಾಯಿ ಒಣಗುತ್ತಾ ಇದೆ, ಶರೀರದಲ್ಲಿ ನಡುಕವುಂಟಾಗುತ್ತಾ ಇದೆ, ರೋಮಾಂಚವಾಗುತ್ತಾ ಇದೆ. ಕೈಯಿಂದ ಗಾಂಡೀವ ಧನುಸ್ಸು ಜಾರಿ ಬೀಳುತ್ತಾ ಇದೆ. ಮತ್ತು ಮೈ ಸುಡುತ್ತಾ ಇದೆ. ನನ್ನ ಮನಸ್ಸು ಭ್ರಮೆಗೊಳಗಾಗಿದೆ ಮತ್ತು ನಾನು ನಿಂತುಕೊಂಡಿರಲೂ ಸಹ ಅಸಮರ್ಥನಾಗುತ್ತಿದ್ದೇನೆ ಆಗ ಭಗವಂತನು ಕೇಳಿದನು ॥೨೬-೩೦॥

**ಇದಲ್ಲದೆ ಮತ್ತೇನನ್ನು ನೋಡುತ್ತಾ ಇರುವೆ ಅರ್ಜುನ?**

ಹೇ ಕೇಶವ! ನಾನು ಶಕುನಗಳನ್ನೂ ಸಹ ವಿಪರೀತವಾಗಿ ಕಾಣುತ್ತಿದ್ದೇನೆ ಮತ್ತು ಯುದ್ಧದಲ್ಲಿ ಈ ಕುಟುಂಬದವರನ್ನು ಕೊಂದು ಯಾವ ಲಾಭವನ್ನು ಸಹ ನೋಡುತ್ತಾ ಇಲ್ಲ ॥೩೧॥

**ಇವರನ್ನು ಕೊಲ್ಲದೆ ರಾಜ್ಯ ಹೇಗೆ ದೊರೆಯುವುದು?**

ಹೇ ಕೃಷ್ಣ! ನಾನು ವಿಜಯವನ್ನು ಬಯಸುತ್ತಾ ಇಲ್ಲ; ಇಲ್ಲವೇ ರಾಜ್ಯವನ್ನು ಇಚ್ಛಿಸುತ್ತಾ ಇಲ್ಲ ಮತ್ತು ಸುಖವನ್ನೂ ಬಯಸುತ್ತಾ ಇಲ್ಲ, ಹೇ ಗೋವಿಂದ! ನಮಗೆ ರಾಜ್ಯದಿಂದಾಗಲೀ, ಸುಖ-ಭೋಗಗಳಿಂದಾಗಲೀ ಅಥವಾ ಬದುಕಿರುವುದರಿಂದಲೂ ಸಹ ಏನು ತಾನೇ ಲಾಭವಿದೆ?

**ನೀನು ವಿಜಯಾದಿಗಳನ್ನು ಏಕೆ ಇಚ್ಛಿಸುವುದಿಲ್ಲ?**

ನಾನು ಯಾರಿಗಾಗಿ ರಾಜ್ಯ, ಸುಖ-ಭೋಗಾದಿಗಳನ್ನು ಇಚ್ಛಿಸುತ್ತೇವೆಯೋ, ಅವರೆಲ್ಲರೂ ತಮ್ಮ ಪ್ರಾಣ ಮತ್ತು ಐಶ್ವರ್ಯಾದಿಗಳ ಆಸೆಯನ್ನು ಬಿಟ್ಟುಕೊಟ್ಟು ಯುದ್ಧಕ್ಕಾಗಿ ನಿಂತುಕೊಂಡಿದ್ದಾರೆ ॥೩೩॥

**ಅವರುಗಳೆಲ್ಲಾ ಯಾರು, ಅರ್ಜುನ ?**

ಆಚಾರ್ಯರು, ತಂದೆ, ಮಕ್ಕಳು, ತಾತಂದಿರು, ಸೋದರಮಾವಂದಿರು, ಮಾವಂದಿರು, ಮೊಮ್ಮಕ್ಕಳು, ಭಾವ-ಮೈದುನರು ಹಾಗೂ ಇನ್ನೂ ಸಹ ಬಹಳಷ್ಟು ಮಂದಿ ಸಂಬಂಧಿಗಳಿದ್ದಾರೆ ॥೩೪॥

**ಈ ಜನರೇ ಒಂದು ವೇಳೆ ನಿನ್ನನ್ನು ಕೊಲ್ಲಲು ಸಿದ್ಧರಾದರೆ?**

ಇವರು ನನ್ನನ್ನು ಬೇಕಾದರೆ ಕೊಂದು ಹಾಕಲಿ. ಆದರೆ ಹೇ ಮಧುಸೂದನ! ನನಗೆ ಮೂರು ಲೋಕಗಳು ದೊರೆಯುವುದಾದರೂ ಸಹ ನಾನು ಇವರನ್ನು ಕೊಲ್ಲಲು ಇಚ್ಛಿಸುವುದಿಲ್ಲ, ಹೀಗಿರುವಾಗ ಭೂಲೋಕದ ರಾಜ್ಯಕ್ಕಾಗಿ ಹೇಳುವುದಾದರೇನು ? ॥೩೫॥

**ಅಯ್ಯಾ! ರಾಜ್ಯವು ಸಿಕ್ಕಿದಾಗ ಬಹಳ ಸಂತೋಷವೇ ಆಗುತ್ತದೆ. ಏನು ನೀನು ಅದನ್ನೂ ಸಹ ಬಯಸುವುದಿಲ್ಲವೇ ?**

ಹೇ ಜನಾರ್ದನ ! ಈ ಧೃತರಾಷ್ಟ್ರನ ಸಂಬಂಧಿಕರನ್ನು (ಅವರು ನಮಗೂ ಸಹ ಸಂಬಂಧಿಕರಾಗಿದ್ದಾರೆ) ಕೊಂದರೆ ನಮಗೆ ಸಂತೋಷವಾಗುವುದೇ? ಈ ಆತ-ತಾಯಿಗಳನ್ನು ಕೊಲ್ಲುವುದರಿಂದ ನಮಗೇ ಪಾಪವುಂಟಾದೀತು. ಆದುದರಿಂದ ಹೇ ಮಾಧವ! ನಮ್ಮ ಕುಟುಂಬದವರನ್ನು ಕೊಂದು ನಾವು ಹೇಗೆತಾನೆ ಸುಖಿಗಳಾಗಬಹುದು? ॥೩೬-೩೭॥

**ಇವರಾದರೋ ನಿಮ್ಮನ್ನು ಕೊಲ್ಲುವುದಕ್ಕಾಗಿ ಸಿದ್ಧರಾಗಿಯೇ ಇದ್ದಾರೆ, ಹೀಗಿರುವಾಗ ನೀನೇ ಏಕೆ ಹಿಂಜರಿಯುತ್ತಿರುವೆ ?**

ಮಹಾಪ್ರಭು ! ಇವರಿಗಾದರೋ ಲೋಭದ ಕಾರಣದಿಂದ ವಿವೇಕ-ವಿಚಾರ ಲುಪ್ತವಾಗಿ ಹೋಗಿದೆ. ಆದುದರಿಂದ ಈ ದುರ್ಯೋಧನಾದಿಗಳು ಕುಲದ ನಾಶದಿಂದ ಉಂಟಾಗುವ ದೋಷವನ್ನು ಮತ್ತು ಮಿತ್ರದ್ರೋಹದಿಂದ ಉಂಟಾಗುವ ಪಾಪವನ್ನು ಗಮನಿಸುತ್ತಾ ಇಲ್ಲ, ಆದಾಗ್ಯೂ ಸಹ ಹೇ ಜನಾರ್ದನ! ಕುಲದ ನಾಶದಿಂದ ಉಂಟಾಗುವ ದೋಷವನ್ನು ತಿಳಿಯುವ ನಾವುಗಳು ಈ ಪಾಪದಿಂದ ಪಾರಾಗಲೇ ಬೇಕು ॥೩೮-೩೯॥

**ಒಂದು ಪಕ್ಷ ಕುಲನಾಶವಾಗಿ ಹೋದರೆ ಏನಾಗುವುದು ?**

ಕುಲನಾಶವಾಗಿ ಹೋದರೆ ಅನೂಚಾನವಾಗಿ ನಡೆದುಕೊಂಡು ಬಂದಿರುವ ಕುಲಧರ್ಮ (ಕುಲ-ಪರಂಪರೆ) ನಾಶವಾಗಿ ಹೋಗುತ್ತದೆ.

**ಕುಲಧರ್ಮ ನಾಶವಾಗಿ ಹೋದರೆ ಏನಾಗುತ್ತದೆ ?**

ಕುಲಧರ್ಮ ನಾಶವಾಗಿ ಹೋದರೆ ಸಂಪೂರ್ಣವಾಗಿ ಕುಲದಲ್ಲಿ ಅಧರ್ಮ ಹರಡಿಹೋಗುತ್ತದೆ.

**ಅಧರ್ಮ ಹರಡಿಹೋಗುವುದರಿಂದ ಏನಾಗುತ್ತದೆ ?**

ಅಧರ್ಮ ಹರಡುವುದರಿಂದ ಕುಲದ ಸ್ತ್ರೀಯರು ದೂಷಿತರಾಗುತ್ತಾರೆ.

**ಸ್ತ್ರೀಯರು ದೂಷಿತರಾದರೆ ಅದರ ಪರಿಣಾಮ ಏನಾಗುತ್ತದೆ?**

ಸ್ತ್ರೀಯರು ದೂಷಿತರಾಗುವುದರಿಂದ ವರ್ಣಸಂಕರ ಉಂಟಾಗುತ್ತದೆ. ॥೪೧॥

**ವರ್ಣಸಂಕರವುಂಟಾಗುವುದರಿಂದ ಏನಾಗುತ್ತದೆ?**

ಈ ವರ್ಣಸಂಕರವು ಕುಲಘಾತುಕರನ್ನೂ ಮತ್ತು ಪೂರ್ಣವಾಗಿ ಕುಲವನ್ನೇ ನರಕಕ್ಕೆ ಕೊಂಡೊಯ್ಯುವಂತಹುದು ಮತ್ತು ಅವರ ಪಿತೃಗಳೂ ಸಹ ಪಿಂಡ ತರ್ಪಣಗಳಿಲ್ಲದೆ ತಮ್ಮ ಸ್ಥಾನದಿಂದ ಅಧೋಗತಿಗೆ ಹೋಗುತ್ತಾರೆ. ಈ ವರ್ಣ ಸಂಕರದಿಂದ ಉಂಟಾಗುವ ದೋಷಗಳಿಂದ ಕುಲಘಾತುಕರ ಹಿಂದಿನಿಂದ ನಡೆದುಕೊಂಡು ಬಂದಿರುವ ಕುಲಧರ್ಮ ಮತ್ತು ಜಾತಿಧರ್ಮ - ಎರಡೂ ಹಾಳಾಗುತ್ತವೆ ॥೪೨-೪೩॥

**ಯಾರ ಕುಲಧರ್ಮಗಳು ನಾಶವಾಗುವವೋ ಆ ಮನುಷ್ಯರ ಗತಿ ಏನಾಗುತ್ತದೆ?**

ಹೇ ಜನಾರ್ದನ! ಆ ಮನುಷ್ಯರು ಬಹಳ ಕಾಲದವರೆಗೆ ನರಕವಾಸ ಮಾಡಬೇಕಾಗುತ್ತದೆ ಎಂದು ನಾವು ಕೇಳಿದ್ದೇವೆ ॥೪೪॥

**ಯುದ್ಧದ ಇಂತಹ ಪರಿಣಾಮವನ್ನು ನೀನು ಮೊದಲಿನಿಂದಲೂ ತಿಳಿದು ಕೊಂಡಿದ್ದಾಗ್ಯೂ ಯುದ್ಧಕ್ಕಾಗಿ ಏಕೆ ಸಿದ್ಧನಾದೆ?**

ನಾವುಗಳೆಲ್ಲರೂ ರಾಜ್ಯ ಮತ್ತು ಸುಖಗಳ ಲೋಭದಿಂದ ನಮ್ಮ ಕುಟುಂಬ ದವರನ್ನು ಕೊಲ್ಲುವುದಕ್ಕಾಗಿ ಸಿದ್ಧರಾಗಿಬಿಟ್ಟಿದ್ದೇವೆ; ಈ ರೀತಿ ಬಹು ದೊಡ್ಡ ಪಾಪ ಮಾಡಲು ನಿಶ್ಚಯಮಾಡಿಕೊಂಡಿದ್ದೇವೆ - ಇದಾದರೋ ಬಹಳ ಆಶ್ಚರ್ಯ ಮತ್ತು ಖೇದದ ವಿಷಯವಾಗಿದೆ ॥೪೫॥

**ಈಗ ನೀನು ಏನು ಮಾಡಲಿಚ್ಛಿಸುವೆ?**

ನಾನು ಅಸ್ತ್ರ-ಶಸ್ತ್ರಗಳನ್ನು ತ್ಯಜಿಸಿ ಯುದ್ಧದಿಂದ ಹಿಂದೆ ಸರಿಯುವೆನು. ನಾನು ಹಾಗೆ ಮಾಡಿದರೂ ಸಹ ಕೈಯಲ್ಲಿ ಶಸ್ತ್ರಧಾರಿಗಳಾದ ದುರ್ಯೋಧನಾದಿಗಳು ನನ್ನನ್ನು ಕೊಂದುಹಾಕಿದರೂ, ಹಾಗೆ ಸಾಯುವುದೂ ಸಹ ನನಗೆ ಬಹಳ ಹಿತಕರವೇ ಆಗುವುದು ॥೪೬॥

**ಸಂಜಯ! ಹೀಗೆ ಹೇಳಿದ ನಂತರ ಅರ್ಜುನ ಏನು ಮಾಡಿದ?**

ಸಂಜಯ ಹೇಳಿದನು - ಆ ರೀತಿ ಹೇಳಿ ಶೋಕದಿಂದ ವ್ಯಾಕುಲಗೊಂಡ ಮನಸ್ಸುಳ್ಳ ಅರ್ಜುನನು ಬಾಣಸಹಿತ ಧನುಸ್ಸನ್ನು ತ್ಯಜಿಸಿಬಿಟ್ಟನು ಮತ್ತು ರಥದ ಮಧ್ಯಭಾಗದಲ್ಲಿ ಕುಳಿತುಬಿಟ್ಟನು ॥೪೭॥

❑❑

# ಎರಡನೇ ಅಧ್ಯಾಯವು

**ಸಂಜಯ! ರಥದ ಮಧ್ಯಭಾಗದಲ್ಲಿ ಕುಳಿತುಕೊಂಡ ಮೇಲೆ ಅರ್ಜುನನ ಸ್ಥಿತಿ ಏನಾಯಿತು?**

ಸಂಜಯ ಹೇಳಿದನು – ಹೇ ಮಹಾರಾಜಾ! ಬಹಳ ಉತ್ಸಾಹದಿಂದ ಯುದ್ಧ ಮಾಡಲು ಬಂದಿದ್ದ ಅರ್ಜುನನು ಹೇಡಿತನದ ಕಾರಣದಿಂದ ಈಗ ವಿಷಾದ ಪಡುತ್ತಿದ್ದಾನೆ ಮತ್ತು ಅವನ ಕಣ್ಣುಗಳಲ್ಲಿ ನೋಡಲೂ ಸಹ ಕಷ್ಟವಾಗುತ್ತಿರುವಷ್ಟು ಕಣ್ಣೀರು ತುಂಬಿ ಬಂದಿವೆ. ಅಂತಹ ಅರ್ಜುನನಿಗೆ ಪರಮಾತ್ಮ ಮಧುಸೂದನನು ಹೇಳಿದನು – 'ಹೇ ಅರ್ಜುನ! ಈ ವಿಷಯ ಸಮಯದಲ್ಲಿ ನಿನಗೆ ಈ ಹೇಡಿತನ ಎಲ್ಲಿಂದ ಬಂತು? ಈ ಹೇಡಿತನವು ಶ್ರೇಷ್ಠ ಪುರುಷರಿಗೆ ಯೋಗ್ಯವಾದುದಲ್ಲ, ಸ್ವರ್ಗ ದೊರಕಿಸುವಂತಹುದೂ ಅಲ್ಲ ಮತ್ತು ಕೀರ್ತಿಯನ್ನುಂಟುಮಾಡುವುದಂತೂ ಅಲ್ಲವೇ ಅಲ್ಲ. ಆದುದರಿಂದ ಹೇ ಪಾರ್ಥ! ನೀನು ಈ ನಪುಂಸಕತ್ವವನ್ನು ಹೊಂದಬೇಡ; ಏಕೆಂದರೆ ನಿನ್ನಂತಹ ಪುರುಷರಿಗೆ ಇದು ಯೋಗ್ಯವಾದುದಲ್ಲ. ಆದುದರಿಂದ ಹೇ ಪರಂತಪ! ಈ ತುಚ್ಛವಾದ ದೌರ್ಬಲ್ಯವನ್ನು ಬಿಟ್ಟು ನೀನು ಯುದ್ಧಕ್ಕೆ ಸಿದ್ಧನಾಗಿ ಎದ್ದು ನಿಲ್ಲು.॥೧-೩॥

**ಸಂಜಯ! ಇದನ್ನು ಕೇಳಿ ಅರ್ಜುನನು ಏನು ಹೇಳಿದನು?**

ಅರ್ಜುನನು ಹೇಳಿದನು – ಪರಮಾತ್ಮ! ನಾನು ಸಾಯುವುದಕ್ಕೆ ಹೆದರುವುದಿಲ್ಲ, ಮಿಗಿಲಾಗಿ ಕೊಲ್ಲುವುದಕ್ಕೆ ಹೆದರುತ್ತೇನೆ. ಹೇ ಅರಿಸೂದನ! ಈ ಭೀಷ್ಮರು ಮತ್ತು ದ್ರೋಣರು ಪೂಜಿಸಲು ಯೋಗ್ಯರಾಗಿದ್ದಾರೆ. ಆದುದರಿಂದ ಹೇ ಮಧುಸೂದನ! ಅಂತಹ ಪೂಜ್ಯರಿಗೆ ಕಟು ಶಬ್ದವನ್ನು ಸಹ ಆಡಬಾರದು. ಅಂದಮೇಲೆ, ಅವರೊಡನೆ ನಾನು ಬಾಣಗಳಿಂದ ಹೇಗೆ ಯುದ್ಧ ಮಾಡಲಿ? ॥೪॥

**ಅಯ್ಯೋ ಕೇವಲ ಕರ್ತವ್ಯಪಾಲನೆಯ ಮುಂದೆ ಮತ್ತೇನನ್ನಾದರೂ ನೋಡಲಾಗುತ್ತದೆಯೇ?**

ಮಹಾಪ್ರಭು! ಮಹಾನುಭಾವರಾದ ಗುರುಜನರನ್ನು ಕೊಲ್ಲುವುದಕ್ಕಿಂತ ನಾನು ಈ ಮನುಷ್ಯಲೋಕದಲ್ಲಿ ಭಿಕ್ಷಾನ್ನದಿಂದ ಜೀವನ ನಿರ್ವಹಿಸುವುದೇ ಶ್ರೇಷ್ಠವೆಂದು ತಿಳಿಯುತ್ತೇನೆ. ನೀನು ಹೇಳಿದಂತೆ ನಾನು ಯುದ್ಧ ಮಾಡಿದರೂ ಸಹ ಗುರುಜನರನ್ನು ಕೊಂದು ಅವರ ರಕ್ತದಿಂದ ತೋಯ್ದ ಹಾಗೂ ಧನಾಪೇಕ್ಷೆಯೇ

ಮುಖ್ಯವಾದ ಸುಖ-ಭೋಗಗಳನ್ನೇ ಅನುಭವಿಸುವೆನಷ್ಟೆ. ಆದರಿಂದ ನನಗೆ ಸುಖವೇನಾದರೂ ಸಿಗಬಹುದೇ?

**ಹಾಗಾದರೆ ನೀನು ಏನು ಮಾಡುವುದು ಸರಿಯೆಂದು ತಿಳಿಯುವೆ ?**

ಹೇ ಭಗವಂತ ! ಯುದ್ಧಮಾಡುವುದು ಸರಿಯೋ ಅಥವಾ ಯುದ್ಧಮಾಡದೇ ಇರುವುದು ಸರಿಯೋ ಹಾಗೂ ಯುದ್ಧದಲ್ಲಿ ನಾವು ಅವರನ್ನು ಜಯಿಸುವೆವೋ ಅಥವಾ ಅವರು ನಮ್ಮನ್ನು ಜಯಿಸುವರೋ - ಇದಾವುದೂ ನಮಗೆ ತಿಳಿಯುತ್ತಾ ಇಲ್ಲ. ಇದೆಲ್ಲಕ್ಕಿಂತ ಹೆಚ್ಚಿನ ಮಾತೆಂದರೆ ಭಗವಂತಾ ! ಯಾರನ್ನು ನಾವು ಕೊಂದು ಬದುಕಲೂ ಸಹ ಇಚ್ಛಿಸುವುದಿಲ್ಲವೋ, ಅಂತಹ ಧೃತರಾಷ್ಟ್ರನ ಸಂಬಂಧಿಕರು ನಮ್ಮ ಎದುರಿಗೆ ನಿಂತಿದ್ದಾರೆ. ಇವರನ್ನು ನಾವು ಹೇಗೆ ಕೊಲ್ಲುವುದು ? ॥೬॥

**ನೀನು ನಿರ್ಣಯಿಸಲಾಗದೇ ಹೋದರೆ, ಮತ್ತೆ ಯಾವ ಉಪಾಯವನ್ನು ಯೋಚಿಸಿರುವೆ ?**

ಹೇ ಪ್ರಭು ! ಹೇಡಿತನದ ದೋಷದಿಂದ ನನ್ನ ಕ್ಷಾತ್ರ-ಸ್ವಭಾವ ಅಡಗಿಹೋಗಿದೆ ಮತ್ತು ಧರ್ಮದ ನಿರ್ಣಯ ಮಾಡುವುದರಲ್ಲಿ ನನ್ನ ಬುದ್ಧಿ ಕೆಲಸ ಮಾಡುತ್ತಾ ಇಲ್ಲ. ಆದುದರಿಂದ ನನಗೆ ನಿಶ್ಚಿತವಾಗಿ ಶ್ರೇಯಸ್ಕರವಾಗಿರುವಂತಹ ವಿಚಾರವನ್ನು ನನಗೋಸ್ಕರ ಹೇಳು. ನಾನು ನಿನ್ನ ಶಿಷ್ಯನಾಗಿದ್ದೇನೆ ಮತ್ತು ನಿನಗೇ ಶರಣಾಗತನಾಗಿದ್ದೇನೆ. ನೀನು ನನಗೆ ಉಪದೇಶಮಾಡು.

ಆದರೆ ಮಹಾಪ್ರಭು ! ನೀನು ಮೊದಲು ಹೇಳಿದಂತೆ ಯುದ್ಧ ಮಾಡೆಂದು ಪುನಃ ಹೇಳಬೇಡ. ಏಕೆಂದರೆ ಯುದ್ಧದ ಪರಿಣಾಮದಿಂದ ನನಗೆ ಇಲ್ಲಿನ ಧನ-ಧಾನ್ಯಗಳಿಂದ ಸಂಪನ್ನವಾದ ಮತ್ತು ನಿಷ್ಕಂಟಕವಾದ ರಾಜ್ಯವೇ ದೊರೆತರೂ ಅಥವಾ ದೇವತೆಗಳ ಆಧಿಪತ್ಯವೇ ದೊರೆತರೂ, ಸಹ ನನ್ನ ಈ ಇಂದ್ರಿಯಗಳನ್ನು ಬರಡಾಗಿಸುವಂತಹ ಶೋಕವು ನಾಶವಾಗುವುದೆಂದು ನಾನು ತಿಳಿಯುವುದಿಲ್ಲ. ॥೭-೮॥

**ಮತ್ತೆ ಏನಾಯಿತು, ಸಂಜಯ ?**

ಸಂಜಯ ಹೇಳಿದನು - ಹೇ ಮಹಾರಾಜ! ನಿದ್ರಾ ವಿಜಯಿಯಾದ ಅರ್ಜುನನು ಅಂತರ್ಯಾಮೀ ಭಗವಾನ್ ಶ್ರೀಕೃಷ್ಣನಿಗೆ - ''ನಾನು ಯುದ್ಧ ಮಾಡುವುದಿಲ್ಲ'' ಎಂದು ಸ್ಪಷ್ಟವಾಗಿ ಹೇಳಿ ಸುಮ್ಮನಾಗಿಬಿಟ್ಟನು ॥೯॥

**ಅರ್ಜುನನು ಸುಮ್ಮನಾದಮೇಲೆ ಭಗವಂತನು ಏನು ಹೇಳಿದನು ?**

ಅಂತರ್ಯಾಮೀ ಭಗವಾನ್ ಶ್ರೀಕೃಷ್ಣನು ಎರಡೂ ಸೈನ್ಯಗಳ ಮಧ್ಯಭಾಗದಲ್ಲಿ ವಿಷಾದಪಡುತ್ತಿರುವ ಅರ್ಜುನನಿಗೆ ಮುಗುಳ್ನಗುತ್ತಾ ಹೇಳತೊಡಗಿದನು. ನೀನು

ಶೋಕಪಡಲು ಯೋಗ್ಯರಲ್ಲದವರಿಗಾಗಿ ಶೋಕಪಡುವೆ ಮತ್ತು ಪಂಡಿತರಂತೆ ದೊಡ್ಡ-ದೊಡ್ಡ ಮಾತನಾಡುತ್ತಿರುವೆ ; ಆದರೆ ಸತ್ತವರಿಗಾಗಲೀ ಮತ್ತು ಬದುಕಿರುವವರಿಗಾಗಲೀ ಪಂಡಿತರು ಶೋಕಪಡುವುದಿಲ್ಲ. ॥೧೦-೧೧॥

**ಏಕೆ ಶೋಕಪಡುವುದಿಲ್ಲ ಭಗವಂತಾ?**

ನಾನು, ನೀನು ಮತ್ತು ಈ ರಾಜರುಗಳು ಮೊದಲು ಇರಲಿಲ್ಲ - ಎಂಬೀ ಮಾತೂ ಇಲ್ಲ ಮತ್ತು ನಾವುಗಳೆಲ್ಲರೂ ಮುಂದೆ ಇರುವುದೂ ಇಲ್ಲ - ಎಂಬೀ ಮಾತು ಸಹ ಇಲ್ಲ. ಅರ್ಥಾತ್ ನಾವುಗಳೆಲ್ಲಾ ಮೊದಲೂ ಸಹ ಇದ್ದೆವು ಮತ್ತು ಮುಂದೆಯೂ ಸಹ ಇರುವೆವು - ಎಂಬುದಾಗಿ ತಿಳಿದುಕೊಂಡು ಪಂಡಿತನು ಶೋಕಪಡುವುದಿಲ್ಲ. ॥೧೨॥

**ಈ ಮಾತನ್ನು ಹೇಗೆ ತಿಳಿಯಬಹುದು?**

ತಮ್ಮಾ! ದೇಹಧಾರಿಯ ಈ ಶರೀರದಲ್ಲಿ ಬಾಲ್ಯ, ಯೌವನ ಮತ್ತು ವೃದ್ಧಾಪ್ಯಗಳು ಉಂಟಾಗುವಂತೆಯೇ ದೇಹಧಾರಿಗೆ ಬೇರೆ ಶರೀರಗಳು ಪ್ರಾಪ್ತಿಯಾಗುತ್ತವೆ. ಈ ವಿಷಯದಲ್ಲಿ ಪಂಡಿತರು ಮೋಹಿತರಾಗುವುದಿಲ್ಲ.॥೧೩॥

**ಭಗವಂತಾ ! ಬಾಲ್ಯಾದಿ ಅವಸ್ಥೆಗಳು ಶರೀರಕ್ಕೆ ಉಂಟಾಗುತ್ತವೆ, ಇದೇನೋ ಸರಿ. ಆದರೆ ಅನುಕೂಲ-ಪ್ರತಿಕೂಲ, ಸುಖದಾಯಕ-ದುಃಖದಾಯಕ ಪದಾರ್ಥಗಳು ಎದುರಾದಾಗ ಏನು ಮಾಡಬೇಕು ?**

ಹೇ ಕುಂತೀನಂದನ ! ಇಂದ್ರಿಯಗಳ ವಿಷಯಗಳೆಲ್ಲವೂ (ಜಡ ಪದಾರ್ಥ) ಅನುಕೂಲತೆ ಮತ್ತು ಪ್ರತಿಕೂಲತೆಗಳ ಮೂಲಕ ಸುಖ ಮತ್ತು ದುಃಖವನ್ನು ಕೊಡುತ್ತವೆ. ಆದರೆ ಅವು ಬರುತ್ತವೆ - ಹೋಗುತ್ತವೆ ಮತ್ತು ಅನಿತ್ಯವೇ ಆಗಿವೆ. ಆದುದರಿಂದ ಹೇ ಅರ್ಜುನ ! ಅವುಗಳನ್ನು ನೀನು ಸಹಿಸಿಕೊ. ಅರ್ಥಾತ್ ಅವುಗಳಲ್ಲಿ ನೀನು ನಿರ್ವಿಕಾರನಾಗಿರು ॥೧೪॥

**ಅವುಗಳನ್ನು ಸಹಿಸುವುದರಿಂದ ಮತ್ತು ಅವುಗಳಲ್ಲಿ ನಿರ್ವಿಕಾರನಾಗಿರುವುದರಿಂದ ಏನು ಲಾಭವಾಗುತ್ತದೆ ?**

ಪುರುಷರಲ್ಲಿ ಶ್ರೇಷ್ಠನಾದ ಹೇ ಅರ್ಜುನ ! ಸುಖ-ದುಃಖಗಳಲ್ಲಿ ಸಮಾನನಾಗಿರುವ (ನಿರ್ವಿಕಾರಿ) ಧೀರಪುರುಷನನ್ನು ಈ ಇಂದ್ರಿಯಗಳ ವಿಷಯಗಳು (ಜಡ ಪದಾರ್ಥ) ಸುಖೀ-ದುಃಖಿಗಳನ್ನಾಗಿ ಮಾಡುವುದಿಲ್ಲ. ಅವನು ಸ್ವತಃಸಿದ್ಧವಾದ ಅಮರತ್ವದ (ಪರಮಾತ್ಮನ ಪ್ರಾಪ್ತಿಯ) ಅನುಭವ ಪಡೆದುಕೊಳ್ಳುತ್ತಾನೆ ॥೧೫॥

**ಅವನು ಅಮರತ್ವದ ಅನುಭವವನ್ನು ಹೇಗೆ ಮಾಡಿಕೊಳ್ಳುತ್ತಾನೆ ?**

ಸತ್ - ಎಂಬುದರ (ಚೇತನ ತತ್ತ್ವ) ಅಸ್ತಿತ್ವಕ್ಕೆ ಎಂದಿಗೂ ಅಭಾವ

ಉಂಟಾಗುವುದಿಲ್ಲ ಮತ್ತು ಅಸತ್ತಿಗೆ (ಜಡ ಪದಾರ್ಥಗಳಿಗೆ) ಅಸ್ತಿತ್ವವೇ ಇರುವುದಿಲ್ಲ -ಎಂಬೀ ಎರಡರ ತತ್ತ್ವವನ್ನು ತತ್ತ್ವದರ್ಶಿಯಾದ (ಜ್ಞಾನೀ) ಮಹಾಪುರುಷರೇ ತಿಳಿದುಕೊಳ್ಳುತ್ತಾರೆ. ಆದುದರಿಂದ ಅವರು ಅಮರರಾಗಿ ಹೋಗುತ್ತಾರೆ. ॥೧೬॥

**ಪರಮಾತ್ಮ ! ಆ ತತ್ (ಅವಿನಾಶೀ) ಎಂದರೆ ಯಾವುದು ?**

ಯಾವುದರಿಂದ ಈ ಸಂಪೂರ್ಣ ಜಗತ್ತು ವ್ಯಾಪಿಸಲ್ಪಟ್ಟಿದೆಯೋ, ಅದನ್ನು ನೀನು ಅವಿನಾಶೀ ಎಂದು ತಿಳಿದುಕೋ. ಈ ಅವಿನಾಶಿಯ ನಾಶವನ್ನು ಯಾರೂ ಸಹ ಮಾಡಲಾರರು ॥೧೭॥

**ಅಸತ್ (ವಿನಾಶೀ) ಎಂದರೆ ಏನು, ಭಗವಂತ ?**

ಈ ಅವಿನಾಶೀ, ಅಪ್ರಮೇಯ ಮತ್ತು ಶಾಶ್ವತವಾಗಿರುವ ಶರೀರಿಯ ಈ ಶರೀರಗಳೆಲ್ಲವೂ ಅಂತ್ಯವುಳ್ಳವು, ವಿನಾಶಿಗಳೂ ಆಗಿವೆ. ಆದುದರಿಂದ ಹೇ ಅರ್ಜುನ ! ನೀನು ನಿನ್ನ ಯುದ್ಧರೂಪೀ ಕರ್ತವ್ಯ - ಕರ್ಮದ ಪಾಲನೆ ಮಾಡು ॥೧೮॥

**ಯುದ್ಧದಲ್ಲಾದರೋ ಸಾಯುವುದು - ಸಾಯಿಸುವುದು ಇದ್ದೇ ಇರುತ್ತದೆ; ಆದುದರಿಂದ ಶರೀರಿಯನ್ನು (ಜೀವಿಯನ್ನು) ಸಾಯುವವ-ಸಾಯಿಸುವವ ಎಂದು ಭಾವಿಸಿಕೊಂಡರೆ ?**

ಈ ಅವಿನಾಶೀ ಜೀವಾತ್ಮನು ಶರೀರಗಳಂತೆ ಸಾಯುವವ ಮತ್ತು ಇದನ್ನು ಸಾಯಿಸುವವ - ಎಂದು ಭಾವಿಸುವವರು ಇವೆರಡನ್ನೂ ಸರಿಯಾಗಿ ತಿಳಿದವರಲ್ಲ, ಏಕೆಂದರೆ ಇದು ಯಾರನ್ನೂ ಕೊಲ್ಲುವುದೂ ಇಲ್ಲ ಮತ್ತು ತಾನೂ ಕೊಲ್ಲಲ್ಪಡುವುದೂ ಇಲ್ಲ. ॥೧೯॥

**ಪರಮಾತ್ಮ ! ಈ ಶರೀರಿಯು ಏಕೆ ಸಾಯುವವನಲ್ಲ ?**

ಈ ಶರೀರಿಯು ಎಂದೂ ಹುಟ್ಟುವುದೂ ಇಲ್ಲ ಮತ್ತು ಸಾಯುವುದೂ ಇಲ್ಲ. ಇದು ಹುಟ್ಟಿ ಪುನಃ ಇರುವಂತಹುದೂ ಅಲ್ಲ. ಇದು ಜನ್ಮರಹಿತ, ನಿತ್ಯ-ನಿರಂತರ ಇರುವಂತಹುದು, ಶಾಶ್ವತ ಮತ್ತು ಅನಾದಿಯಾಗಿದೆ. ಶರೀರವು ಕೊಲ್ಲಲ್ಪಟ್ಟರೂ ಸಹ ಇದು ಕೊಲ್ಲಲ್ಪಡುವುದಿಲ್ಲ. ॥೨೦॥

**ಆ ರೀತಿ ತಿಳಿದುಕೊಳ್ಳುವುದರಿಂದ ಏನಾಗುವುದು ?**

ಹೇ ಪಾರ್ಥ ! ಈ ಶರೀರಿಯನ್ನು ಅವಿನಾಶೀ, ಶಾಶ್ವತ, ಜನ್ಮರಹಿತ ಮತ್ತು ಅವ್ಯಯ- ಎಂಬುದಾಗಿ ತಿಳಿದ ಮನುಷ್ಯನು ಯಾರನ್ನಾದರೂ ಹೇಗೆ ಕೊಲ್ಲಬಲ್ಲನು ಮತ್ತು ಯಾರನ್ನಾದರೂ ಹೇಗೆ ಕೊಲ್ಲಿಸಬಲ್ಲನು? ॥೨೧॥

**ಭಗವಂತಾ! ಹಾಗಾದರೆ ಸಾಯುವವರು ಯಾರು?**

ಅಯ್ಯಾ ! ಶರೀರ ಸಾಯುತ್ತದೆ. ಮನುಷ್ಯನು ಹಳೆಯ ಬಟ್ಟೆಗಳನ್ನು ಬಿಟ್ಟು ಹೊಸ ಬಟ್ಟೆಗಳನ್ನು ಧರಿಸುವಂತೆಯೇ ಈ ಶರೀರಿಯು ಹಳೆಯ ಶರೀರವನ್ನು ಬಿಟ್ಟು ಬೇರೆ ಹೊಸ ಶರೀರಗಳಿಗೆ ಹೋಗುತ್ತಾನೆ. ॥೨೨॥

**ಹೊಸ ಹೊಸ ಶರೀರಗಳನ್ನು ಧರಿಸುವುದರಿಂದ ಇದರಲ್ಲಿ ಯಾವುದಾದರು ವಿಕಾರ ಉಂಟಾಗಬಹುದಲ್ಲ?**

ಇಲ್ಲ, ಇದರಲ್ಲಿ ಎಂದಿಗೂ ಯಾವ ವಿಕಾರವೂ ಉಂಟಾಗುವುದಿಲ್ಲ; ಏಕೆಂದರೆ ಈ ಶರೀರಿಯನ್ನು (ಆತ್ಮನನ್ನು) ಶಸ್ತ್ರಗಳು ಕತ್ತರಿಸಲಾರವು, ಬೆಂಕಿ ಸುಡಲಾರದು ನೀರು ನೆನೆಯಿಸಲಾರದು ಮತ್ತು ಗಾಳಿ ಒಣಗಿಸಲಾರದು. ॥೨೩॥

**ಇದು ಶಸ್ತ್ರಾದಿಗಳಿಂದ ಕತ್ತರಿಸಲ್ಪಡಲಾರದು, ಸುಡಲ್ಪಡಲಾರದು, ನೆನೆಯಿಸಲ್ಪಡಲಾರದು ಮತ್ತು ಒಣಗಿಸಲ್ಪಡಲಾರದು ಏಕೆ?**

ಈ ಶರೀರಿಯು ಕತ್ತರಿಸಲ್ಪಡದು, ಸುಡದು, ನೆನೆಯಲಾರದು ಮತ್ತು ಒಣಗಿಸಲೂ ಸಹ ಅಸಾಧ್ಯನು ; ಏಕೆಂದರೆ ಈತನು ಶಾಶ್ವತ, ಎಲ್ಲದರಲ್ಲಿಯೂ ಪರಿಪೂರ್ಣ, ಸ್ಥಿರಸ್ವಭಾವದವನು, ಅಚಲ ಮತ್ತು ಸನಾತನನಾಗಿದ್ದಾನೆ. ಈ ದೇಹಿಯು ಇಂದ್ರಿಯಾದಿಗಳ ವಿಷಯವಲ್ಲ ಅರ್ಥಾತ್ ಈತ ಪ್ರತ್ಯಕ್ಷವಾಗಿ ಕಾಣಿಸುವವನಲ್ಲ, ಈತ ಅಂತಃಕರಣದ ವಿಷಯವೂ ಸಹ ಅಲ್ಲ ಮತ್ತು ಈತನಲ್ಲಿ ಯಾವ ವಿಕಾರವೂ ಸಹ ಉಂಟಾಗುವುದಿಲ್ಲ, ಆದುದರಿಂದ ಈ ದೇಹಿಯನ್ನು (ಆತ್ಮವನ್ನು) ಹೀಗೆ ತಿಳಿದುಕೊಂಡು ನೀನು ಶೋಕಪಡಬಾರದು. ॥೨೪-೨೫॥

**ಈ ಶರೀರಿಯನ್ನು ನಿರ್ವಿಕಾರನೆಂದು ಭಾವಿಸಿದರೆ ಶೋಕವುಂಟಾಗಲಾರದು, ಆದರೆ ವಿಕಾರಿಯೆಂದು ಭಾವಿಸಿದರೆ ಶೋಕವುಂಟಾಗುವುದಲ್ಲ?**

ಹೇ ಮಹಾಬಾಹು! ನೀನು ಈ ಆತ್ಮನನ್ನು ಸದಾ ಹುಟ್ಟುವವನು ಮತ್ತು ಸದಾ ಸಾಯುವವನೆಂದು ಭಾವಿಸಿಕೊಂಡರೂ ಸಹ ನೀನು ಇದಕ್ಕಾಗಿ ಶೋಕ ಪಡಬಾರದು; ಏಕೆಂದರೆ ಹುಟ್ಟಿದವರು ಸಾಯುವುದು ಅನಿವಾರ್ಯ ಮತ್ತು ಸತ್ತವರು ಹುಟ್ಟುವುದೂ ಅನಿವಾರ್ಯ - ಈ ನಿಯಮವನ್ನು ಯಾರೂ ತಪ್ಪಿಸಲಾರರು. ಆದುದರಿಂದ ಶರೀರಿಗಾಗಿ ನೀನು ಶೋಕಪಡಬಾರದು. ॥೨೬-೨೭॥

**ಜೀವಾತ್ಮನಿಗಾಗಿ ಶೋಕಪಡಬಾರದು, ಅದೇನೋ ಸರಿ. ಆದರೆ ಪರಮಾತ್ಮ! ಶರೀರಕ್ಕಾಗಿಯಾದರೂ ಶೋಕವುಂಟಾಗುತ್ತದೆಯಲ್ಲಾ?**

ಶರೀರಕ್ಕಾಗಿಯೂ ಸಹ ಶೋಕವುಂಟಾಗಲಾರದು; ಏಕೆಂದರೆ ಎಲೈ ಭಾರತ!

ಎಲ್ಲಾ ಪ್ರಾಣಿಗಳೂ ಹುಟ್ಟುವುದಕ್ಕಿಂತ ಮೊದಲು ಅಪ್ರಕಟವಾಗಿದ್ದವು ಮತ್ತು ಸತ್ತ ನಂತರ ಪುನಃ ಅಪ್ರಕಟವಾಗಿ ಹೋಗುವುವು. ಕೇವಲ ಮಧ್ಯದಲ್ಲಿ ಪ್ರಕಟವಾಗಿ ಗೋಚರಿಸುತ್ತವೆ. ಆದುದರಿಂದ ಇದರಲ್ಲಿ ಶೋಕಪಡುವಂತಹ ವಿಚಾರವಾದರೂ ಯಾವುದಿದೆ?

**ಹಾಗಾದರೆ ಶೋಕವು ಏಕೆ ಉಂಟಾಗುತ್ತದೆ?**

ತಿಳಿಯದೇ ಇರುವುದರಿಂದ.

**ತಿಳಿದುಕೊಳ್ಳುವುದು ಹೇಗೆ?**

ಅದನ್ನು ತಿಳಿದುಕೊಳ್ಳುವುದು ಅರ್ಥಾತ್ ಅನುಭವ ಮಾಡಿಕೊಳ್ಳುವುದು ಇಂದ್ರಿಯಗಳು, ಮನಸ್ಸು ಬುದ್ಧಿಗಳಿಂದ ಆಗುವುದಿಲ್ಲ. ಆದುದರಿಂದ ಈ ಆತ್ಮನನ್ನು ನೋಡುವುದು, ಹೇಳುವುದು, ಕೇಳುವುದು ಎಲ್ಲವೂ ಆಶ್ಚರ್ಯದಂತೆಯೇ ಆಗುತ್ತದೆ. ಆದುದರಿಂದ ಇದನ್ನು ಕೇಳಿಕೊಂಡು ಯಾರೂ ಸಹ ತಿಳಿಯಲಾರನು. ಅರ್ಥಾತ್ ಇದರ ಅನುಭವವು ತನ್ನಿಂದ - ತಾನೇ ಉಂಟಾಗುತ್ತದೆ. ॥೨೯॥

**ಹಾಗಾದರೆ ಅದು ಹೇಗೆ?**

ಎಲೈ ಭರತವಂಶೀ ಅರ್ಜುನ! ಎಲ್ಲರ ದೇಹದಲ್ಲಿರುವಂತಹ ಈ ದೇಹಿಯು (ಜೀವಾತ್ಮನು) ನಿತ್ಯನೂ ಅವಧ್ಯನೂ, ಎಂದು ತಿಳಿದುಕೊಂಡು ನೀನು ಯಾವ ಪ್ರಾಣಿಗಾಗಿಯೂ ಸಹ ಶೋಕಪಡಬಾರದು. ॥೩೦॥

**ಶೋಕವನ್ನು ನಾಶಮಾಡುವುದಕ್ಕೇನೋ ನೀನು ಬಹಳಷ್ಟು ವಿಚಾರಗಳನ್ನು ತಿಳಿಸಿದೆ. ಆದರೆ ನನಗಾಗುತ್ತಿರುವ ಪಾಪದ ಭಯ ದೂರವಾಗುವುದು ಹೇಗೆ?**

ನಿನ್ನ ಧರ್ಮವನ್ನು (ಕ್ಷಾತ್ರ ಧರ್ಮ) ಕಂಡುಕೊಂಡಾದರೂ ಸಹ ನೀನು ಭಯಭೀತನಾಗಬಾರದು; ಏಕೆಂದರೆ ಕ್ಷತ್ರಿಯನಿಗೆ ಧರ್ಮಮಯ ಯುದ್ಧಕ್ಕಿಂತ ಹೆಚ್ಚಿನದಾದ ಬೇರೆ ಯಾವ ಶ್ರೇಯಸ್ಕರವಾದ ಕರ್ಮವಿಲ್ಲ. ॥೩೧॥

**ಹಾಗಾದರೆ ಕ್ಷತ್ರಿಯನು ಯುದ್ಧಮಾಡುತ್ತಲೇ ಇರಬೇಕೆ?**

ಅಲ್ಲಯ್ಯಾ, ಯುದ್ಧವು ತಾನೇ ತಾನಾಗಿ ಒದಗಿ ಬಂದಾಗ, ಆ ಯುದ್ಧವು ಕ್ಷತ್ರಿಯನಿಗೆ ಸ್ವರ್ಗಕ್ಕೆ ಹೋಗಲು ತೆರೆದಿಟ್ಟ ಬಾಗಿಲಾಗಿದೆ. ಆದ್ದರಿಂದ ಹೇ ಪಾರ್ಥ ಇಂತಹ ಯುದ್ಧವು ಯಾವ ಕ್ಷತ್ರಿಯರಿಗೆ ಒದಗಿ ಬರುತ್ತದೆಯೋ, ಅವರೇ ವಾಸ್ತವವಾಗಿಯೂ ಸುಖಿಗಳಾಗಿದ್ದಾರೆ* ॥೩೨॥

* ಭೋಗಗಳು ದೊರಕುವುದು ಯಾವುದೇ ಸುಖವಲ್ಲ, ಪ್ರತಿಯಾಗಿ ಅದು ಮಹಾನ್ ದುಃಖಗಳಿಗೆ ಕಾರಣವಾಗಿದೆ (೫/೨೨). ದುಃಖರಹಿತವಾದುದೇ ವಾಸ್ತವವಾದ ಸುಖ.

**ಆ ರೀತಿ ತಾನೇ-ತಾನಾಗಿ ಪ್ರಾಪ್ತಿಯಾದ ಯುದ್ಧವನ್ನು ನಾನು ಮಾಡದೇ ಹೋದರೆ?**

ನೀನು ಅಂತಹ ಧರ್ಮಮಯ ಯುದ್ಧವನ್ನು ಮಾಡದೇ ಹೋದರೆ ನಿನ್ನ ಕ್ಷಾತ್ರ ಧರ್ಮ ಮತ್ತು ನಿನ್ನ ಕೀರ್ತಿ ಹಾಳಾಗಿ ಹೋಗುವವು. ಹಾಗೂ ನಿನಗೆ ಕರ್ತವ್ಯಪಾಲನೆ ಮಾಡದೇಹೋದ ಪಾಪವೂ ಸಹ ತಗಲುವುದು. ॥೩೩॥

**ಅಪಕೀರ್ತಿಯಿಂದ ಏನಾಗುವುದು ?**

ಅಯ್ಯಾ! ನೀನು ಯುದ್ಧ ಮಾಡದೇ ಹೋದರೆ ದೇವತೆಗಳು, ಮನುಷ್ಯರಾದಿ ಎಲ್ಲರೂ ಬಹಳ ದಿವಸಗಳವರೆಗೂ ಉಳಿದುಕೊಳ್ಳುವ ನಿನ್ನ ಅಪಕೀರ್ತಿಯನ್ನು ಆಡಿಕೊಳ್ಳುವರು. ಆ ಅಪಕೀರ್ತಿಯು ಆದರಣೀಯನೂ, ಮರ್ಯಾದಸ್ಥನೂ ಆದ ಮನುಷ್ಯನಿಗೆ ಮರಣಕ್ಕಿಂತಲೂ ಸಹ ಹೆಚ್ಚಿನ ದುಃಖಕರವಾಗಿದೆ.*

**ಇನ್ನೇನಾಗುವುದು ಭಗವಂತ ?**

ಭೀಷ್ಮ ದ್ರೋಣಾಚಾರ್ಯರೇ ಆದಿ ಮಹಾರಥಿಕರ ದೃಷ್ಟಿಯಲ್ಲಿ ನೀನು ತುಚ್ಛನಾಗುವೆ ಮತ್ತು ಆ ಮಹಾರಥಿಕರೆಲ್ಲರೂ ನಿನ್ನನ್ನು ಮರಣ ಭಯದ ಕಾರಣ ಯುದ್ಧದಿಂದ ಹಿಮ್ಮೆಟ್ಟಿದವನೆಂದು ತಿಳಿದುಕೊಳ್ಳುವರು. ॥೩೫॥

**ಪರಮಾತ್ಮ ! ನಾನಿದನ್ನು ಸಹಿಸಲಾರೆನೇ ?**

ಇಲ್ಲಾ ನೀನು ಸಹಿಸಲಾರೆ. ಏಕೆಂದರೆ ನಿನ್ನ ಶತ್ರುಗಳಿಗೆ ವೈರಭಾವವನ್ನು ಪ್ರಕಟಪಡಿಸುವ ಅವಕಾಶ ದೊರಕಬಹುದು. ಅವರು ನಿನ್ನ ಸಾಮರ್ಥ್ಯವನ್ನು ನಿಂದಿಸುತ್ತಾ ನಿನ್ನ ಬಗ್ಗೆ ಆಡಬಾರದ ಬಹಳಷ್ಟು ಮಾತುಗಳನ್ನು ಆಡುವರು. ಅದಕ್ಕಿಂತ ಮಿಗಿಲಾದ ದುಃಖ ಬೇರೆ ಯಾವುದಿರುವುದು ? ॥೩೬॥

**ಮತ್ತು ನಾನು ಯುದ್ಧ ಮಾಡಿದರೆ ?**

ಯುದ್ಧಮಾಡುತ್ತಾ ನೀನು ಕೊಲ್ಲಲ್ಪಟ್ಟರೆ ನಿನಗೆ ಸ್ವರ್ಗ ದೊರೆಯುವುದು ಮತ್ತು ಯುದ್ಧದಲ್ಲಿ ನೀನು ವಿಜಯಿಯಾದರೆ ನಿನಗೆ ಪೃಥ್ವಿಯ ರಾಜ್ಯ

---

ಸ್ವಧರ್ಮರೂಪೀ ಕರ್ತವ್ಯಕರ್ಮ ಮಾಡಲು ಅವಕಾಶ ದೊರಕುವುದೇ ದುಃಖರಹಿತವಾದ ಸುಖ. ಆದುದರಿಂದ ಯಾರಿಗೆ ಕರ್ತವ್ಯಪಾಲನೆಯ ಅವಕಾಶ ಪ್ರಾಪ್ತಿಯಾಗಿದೆಯೋ, ಅವರೇ ನಿಜವಾಗಿಯೂ ಸುಖಿ ಮತ್ತು ಭಾಗ್ಯಶಾಲಿಗಳು.

* ಮರಣಮಾತ್ರದಿಂದ ಅಪಕೀರ್ತಿಯೇನೂ ಉಂಟಾಗುವುದಿಲ್ಲ, ಏಕೆಂದರೆ ಮರಣವು ಪ್ರತಿಯೊಬ್ಬರಿಗೂ ಉಂಟಾಗುವುದು. ಅಪಕೀರ್ತಿಯಾದರೋ ತನ್ನ ಕರ್ತವ್ಯದಲ್ಲಿ ಚ್ಯುತಿಯಾದಾಗಲೇ ಉಂಟಾಗುತ್ತದೆ.

ದೊರೆಯುವುದು. ಆದುದರಿಂದ ಎಲೇ ಕುಂತೀನಂದನ ! ನೀನು ಯುದ್ಧವನ್ನು ನಿಶ್ಚಯಿಸಿಕೊಂಡು ಎದ್ದು ನಿಲ್ಲು. ॥೩೭॥

**ಭಗವಂತ ! ಯುದ್ಧದಿಂದ ನನಗೆ ಪಾಪ ತಟ್ಟುವುದಿಲ್ಲವೆ ?**

ಇಲ್ಲ. ಪಾಪವಾದರೋ ಸ್ವಾರ್ಥಬುದ್ಧಿಯಿಂದಲೇ ಉಂಟಾಗುತ್ತದೆ. ಆದುದರಿಂದ ನೀನು ಜಯ-ಪರಾಜಯ, ಲಾಭ-ಹಾನಿ, ಮತ್ತು ಸುಖ-ದುಃಖಗಳಲ್ಲಿ ಸಮಬುದ್ಧಿಯನ್ನಿಟ್ಟುಕೊಂಡು ಯುದ್ಧಮಾಡು. ಈ ಪ್ರಕಾರ ಯುದ್ಧಮಾಡುವುದರಿಂದ ನಿನಗೆ ಪಾಪ ತಟ್ಟುವುದಿಲ್ಲ ॥೩೮॥

**ಪರಮಾತ್ಮ ! ಸಮಬುದ್ಧಿಯಿಂದ ಕರ್ಮ ಮಾಡುತ್ತಾ ಕಿಂಚಿತ್ ಸಹ ಪಾಪ ತಟ್ಟುವುದಿಲ್ಲ; ಅದರ ವಿಶೇಷತೆ ಇನ್ನೇನಿದೆ ?**

ಈ ಸಮಬುದ್ಧಿಯ ವಿಷಯವನ್ನು ನಾನು ಮೊದಲೇ ಸಾಂಖ್ಯಯೋಗದಲ್ಲಿ ಹೇಳಿಬಿಟ್ಟಿದ್ದೇನೆ. ಈಗ ನೀನು ಇದನ್ನು ಕರ್ಮಯೋಗದ ವಿಷಯದಲ್ಲಿ ಕೇಳು -

೧. ಈ ಸಮಬುದ್ಧಿಯಿಂದ ಕೂಡಿರುವ ನೀನು ಸಂಪೂರ್ಣವಾಗಿ ಕರ್ಮಗಳ ಬಂಧನದಿಂದ ಬಿಡುಗಡೆಯಾಗುವೆ.

೨. ಈ ಸಮಬುದ್ಧಿಯ ಆರಂಭಮಾತ್ರ ಕೂಡಾ ನಾಶವಾಗುವುದಿಲ್ಲ.

೩. ಇದರ ಅನುಷ್ಠಾನದ ಫಲ ಎಂದಿಗೂ ವಿರುದ್ಧವಾಗುವುದಿಲ್ಲ.

೪. ಇದರ ಸ್ವಲ್ಪ ಮಾತ್ರ ಅನುಷ್ಠಾನವೂ ಸಹ ಜನ್ಮ-ಮರಣ ರೂಪೀ ಮಹಾನ್ ಭಯದಿಂದ ರಕ್ಷಣೆ ಮಾಡುತ್ತದೆ. ॥೩೯-೪೦॥

**ನೀನು ಇಷ್ಟೊಂದು ಮಹಿಮೆಯನ್ನು ಹೊಗಳಿರುವ ಆ ಸಮಬುದ್ಧಿಯನ್ನು ಪಡೆದುಕೊಳ್ಳುವ ಉಪಾಯವೇನು ?**

ಈ ಸಮಬುದ್ಧಿಯನ್ನು ಪಡೆಯುವ ವಿಷಯದಲ್ಲಿ ವ್ಯವಸಾಯಾತ್ಮಿಕಾ (ಓರ್ವ ಪರಮಾತ್ಮ ಪ್ರಾಪ್ತಿಯ ನಿಶ್ಚಯವುಳ್ಳ) ಬುದ್ಧಿಯು ಒಂದೇ ಬಗೆಯದಾಗಿರುತ್ತದೆ. ಆದರೆ ಪರಮಾತ್ಮ ಪ್ರಾಪ್ತಿಯ ಒಂದು ನಿಶ್ಚಯ ಇಲ್ಲದಿರುವಂತಹ ಮನುಷ್ಯರ ಬುದ್ಧಿಗಳು (ನಿಶ್ಚಯ) ಅನಂತ ಮತ್ತು ಬಗೆ-ಬಗೆಯಾಗಿರುತ್ತವೆ. ॥೪೧॥

**ಅವರಿಗೆ ಪರಮಾತ್ಮ ಪ್ರಾಪ್ತಿಯ ಒಂದು ನಿಶ್ಚಯ ಏಕೆ ಉಂಟಾಗುವುದಿಲ್ಲ ?**

೧. ಯಾರು ಕಾಮನೆಗಳಲ್ಲಿ ತನ್ಮಯರಾಗಿರುತ್ತಾರೆಯೋ, ೨. ಸ್ವರ್ಗವನ್ನೇ ಶ್ರೇಷ್ಠವೆಂದು ಭಾವಿಸುತ್ತಾರೆಯೋ, ೩. ವೇದಗಳಲ್ಲಿ ಹೇಳಲಾಗಿರುವ ಸಕಾಮ ಕರ್ಮಗಳಲ್ಲಿಯೇ ಪ್ರೀತಿಯನ್ನಿಟ್ಟುಕೊಂಡಿದ್ದಾರೆಯೋ, ೪. ಭೋಗಗಳ ಹೊರತಾಗಿ ಮತ್ತೇನೂ ಇಲ್ಲವೇ ಇಲ್ಲ - ಎಂದು ಹೇಳುತ್ತಾರೆಯೋ, ಆ ಅಜ್ಞಾನಿ ಮನುಷ್ಯರು

ಜನ್ಮರೂಪೀ ಕರ್ಮಫಲವನ್ನು ಕೊಡುವಂತಹ ಹಾಗೂ ಭೋಗ ಮತ್ತು ಐಶ್ವರ್ಯಗಳ ಪ್ರಾಪ್ತಿಗಾಗಿ ಬಹಳಷ್ಟು ಕ್ರಿಯೆಗಳ ವರ್ಣನೆ ಮಾಡುವಂತಹ ಈ ಆಡಂಬರದ ತೋರಿಕೆಯ ಮಾತುಗಳನ್ನು ಹೇಳುತ್ತಿರುತ್ತಾರೆ. ಸುಖ-ಭೋಗಗಳನ್ನು ವರ್ಣಿಸುವಂತಹ ಪುಷ್ಪಿತ ತೋರಿಕೆಯ ಮಾತಿನಿಂದ ಯಾರ ಮನಸ್ಸು ಅಪಹರಿಸಲ್ಪಟ್ಟಿದೆಯೋ ಅರ್ಥಾತ್ ಸುಖ-ಭೋಗಗಳ ಕಡೆಗೆ ಆಕರ್ಷಿತವಾಗಿದೆಯೋ ಮತ್ತು ಯಾರು ಭೋಗೈಶ್ವರ್ಯಗಳಲ್ಲಿ ಅತ್ಯಂತ ಆಸಕ್ತರಾಗಿದ್ದಾರೆಯೋ, ಆ ಮನುಷ್ಯರಿಗೆ ಪರಮಾತ್ಮನಲ್ಲಿ ಒಂದು ನಿಶ್ಚಯವಾದ ಬುದ್ಧಿ ಉಂಟಾಗಲಾರದು. ॥೪೨-೪೪॥

**ಭಗವಂತ ! ಭೋಗೈಶ್ವರ್ಯಗಳ ಆಸಕ್ತಿಯಿಂದ ಪಾರಾಗಲು ನಾನು ಏನು ಮಾಡಬೇಕು ?**

ವೇದಗಳು ಮೂರು ಗುಣಗಳ ಕಾರ್ಯದ (ಜಗತ್ತಿನ) ವರ್ಣನೆ ಮಾಡುತ್ತವೆ. ಆದುದರಿಂದ ಎಲೈ ಅರ್ಜುನ! ನೀನು ವೇದಗಳಲ್ಲಿ ಹೇಳಲಾಗಿರುವ ಸಕಾಮ-ಕರ್ಮಗಳಿಂದ ಹೊರತಾಗು. ರಾಗ-ದ್ವೇಷಾದಿ ರಹಿತನಾಗು ಮತ್ತು ನಿತ್ಯ-ನಿರಂತರ ಸ್ಥಿರವಾದ ಪರಮಾತ್ಮ ತತ್ತ್ವದಲ್ಲಿ ಅಚಲವಾಗಿರು. ನೀನು ಅಪ್ರಾಪ್ತವಸ್ತುವಿನ ಪ್ರಾಪ್ತಿಗಾಗಿ ಮತ್ತು ಪ್ರಾಪ್ತವಾದ ವಸ್ತುವಿನ ರಕ್ಷಣೆಗಾಗಿಯೂ ಸಹ ಚಿಂತಿಸಬೇಡ. ಕೇವಲ ಪರಮಾತ್ಮನ ಪರಾಯಣನಾಗು ಅರ್ಥಾತ್ ಏಕಮಾತ್ರ ಪರಮಾತ್ಮ ಪ್ರಾಪ್ತಿಯನ್ನೇ ಗುರಿಯಾಗಿಟ್ಟುಕೋ ॥೪೫॥

**ಅಂತಹ ಒಂದು ನಿಶ್ಚಯವನ್ನು ಯಾರಾದರೂ ಮಾಡಿಕೊಂಡರೆ ಅದರ ಪರಿಣಾಮ ಏನಾಗಬಹುದು ?**

ಬಹಳ ದೊಡ್ಡ ಸರೋವರ ದೊರೆತ ನಂತರ ಚಿಕ್ಕ ಸರೋವರಕ್ಕೆ ಯಾವ ಮಹತ್ತ್ವವೂ ಇರುವುದಿಲ್ಲ, ಯಾವ ಅವಶ್ಯಕತೆಯೂ ಇರುವುದಿಲ್ಲ, ಅದರಂತೆಯೇ ವೇದಗಳ ಮತ್ತು ಶಾಸ್ತ್ರಗಳ ತಾತ್ಪರ್ಯವನ್ನು ತಿಳಿದ ತತ್ತ್ವಜ್ಞ ಜೀವನ್ಮುಕ್ತ ಮಹಾಪುರುಷರ ದೃಷ್ಟಿಯಲ್ಲಿ, ಅವರ ಮನಸ್ಸಿನಲ್ಲಿ ಜಗತ್ತಿನ ಭೋಗೈಶ್ವರ್ಯಗಳ ಯಾವ ಮಹತ್ತ್ವವೂ ಇರುವುದಿಲ್ಲ, ॥೪೬॥

**ಅಂತಹ ಸ್ಥಿತಿಯನ್ನು ಪಡೆದುಕೊಳ್ಳುವುದಕ್ಕೆ ನನಗಾಗಿ ಯಾವುದಾದರೂ ಉಪಾಯವುಂಟೇ ?**

ಹೌದು, ಕರ್ಮಯೋಗವಿದೆ. ಕರ್ತವ್ಯಕರ್ಮ ಮಾಡುವುದರಲ್ಲಿ ನಿನಗೆ ಅಧಿಕಾರವಿದೆ. ಫಲದಲ್ಲಿ ಎಂದಿಗೂ ಇಲ್ಲ, ಅರ್ಥಾತ್ ನೀನು ಫಲಾಪೇಕ್ಷೆಯನ್ನು ಇಟ್ಟುಕೊಳ್ಳದೆ ನಿನ್ನ ಕರ್ತವ್ಯದ ಪಾಲನೆ ಮಾಡು. ನೀನು ಕರ್ಮಫಲದ ಕಾರಣನೂ ಆಗಬೇಡ. ಅರ್ಥಾತ್ ಯಾವುದರಿಂದ ಕರ್ಮ ಮಾಡಲ್ಪಡುವುದೋ, ಆ ಶರೀರ

ಇಂದ್ರಿಯಗಳು - ಮನಸ್ಸು - ಬುದ್ಧಿ ಇತ್ಯಾದಿಗಳಲ್ಲಿಯೂ ಸಹ ಮಮತೆಯನ್ನಿಡಬೇಡ.

**ಹಾಗಾದರೆ ನಾನು ಕರ್ಮ ಮಾಡುವುದಾದರೂ ಏಕೆ?**

ಕರ್ಮ ಮಾಡದೇ ಇರುವುದರಲ್ಲಿಯೂ ಸಹ ನಿನಗೆ ಆಸಕ್ತಿಯುಂಟಾಗ ಬಾರದು ॥೪೭॥

**ಅಂದಮೇಲೆ ಕರ್ಮವನ್ನು ಹೇಗೆ ಮಾಡಲಿ?**

ಸಿದ್ಧಿ - ಅಸಿದ್ಧಿಗಳಲ್ಲಿ ಸಮಾನವಾಗಿರುವುದನ್ನು 'ಯೋಗ' ಎಂದು ಹೇಳಲಾಗುತ್ತದೆ. ಆದುದರಿಂದ ಎಲೈ ಧನಂಜಯ! ಆಸಕ್ತಿಯನ್ನು ತ್ಯಜಿಸಿ ನೀನು ಯೋಗ (ಸಮತೆ)ದಲ್ಲಿ ಸ್ಥಿರವಾಗಿದ್ದುಕೊಂಡು ಕರ್ಮ ಮಾಡು. ॥೪೮॥

**ಯೋಗ (ಸಮತೆ)ದಲ್ಲಿ ಸ್ಥಿರವಾಗಿದ್ದೂ ಕರ್ಮಮಾಡದೇ ಹೋದರೆ?**

ಈ ಸಮತ್ವವಿಲ್ಲದ ಸಕಾಮ ಕರ್ಮವು ಅತ್ಯಂತ ಕೆಳಮಟ್ಟದ್ದಾಗಿದೆ. ಆದುದರಿಂದ ಹೇ ಧನಂಜಯ ! ನೀನು ಸಮಬುದ್ಧಿಯನ್ನೇ ಆಶ್ರಯಿಸು; ಏಕೆಂದರೆ ಕರ್ಮಫಲದ ಇಚ್ಛೆಯುಳ್ಳವರು ಕೃಪಣರು (ದೀನ) ಅರ್ಥಾತ್ ಕರ್ಮಫಲದ ಗುಲಾಮರಾಗಿದ್ದಾರೆ. ॥೪೯॥

**ಕರ್ಮಫಲದ ಇಚ್ಛೆಯುಳ್ಳವರು ಕೃಪಣರು, ಹಾಗಾದರೆ ಶ್ರೇಷ್ಠರು ಯಾರು?**

ಸಮಬುದ್ಧಿಯುಳ್ಳ ಮನುಷ್ಯನು ಶ್ರೇಷ್ಠನು. ಸಮಬುದ್ಧಿಯುಳ್ಳ ಮನುಷ್ಯ ಈ ಜೀವಿತ ಸ್ಥಿತಿಯಲ್ಲಿಯೇ ಪಾಪ - ಪುಣ್ಯಗಳಿಲ್ಲದವನಾಗಿ ಹೋಗುತ್ತಾನೆ. ಆದುದರಿಂದ ನೀನು ಸಮತೆಯಲ್ಲಿಯೇ ಸ್ಥಿರನಾಗು; ಏಕೆಂದರೆ ಕರ್ಮಗಳಲ್ಲಿ ಸಮಾನತೆಯೇ ಕುಶಲತೆಯಾಗಿದೆ. ॥೫೦॥

**ಪರಮಾತ್ಮ ಸಮಬುದ್ಧಿಯ ಪರಿಣಾಮವೇನಾಗುವುದು?**

ಸಮತೆಯುಳ್ಳ ಜ್ಞಾನಿಗಳು ಕರ್ಮಜನ್ಯ ಫಲವನ್ನು ತ್ಯಾಗಮಾಡಿ ಮತ್ತು ಜನ್ಮರೂಪೀ ಬಂಧನದಿಂದ ಬಿಡುಗಡೆಹೊಂದಿ ನಿರ್ವಿಕಾರ ಪರಮಪದವನ್ನು ಪಡೆಯುತ್ತಾರೆ ॥೫೧॥

**ನಾನು ಕರ್ಮಜನ್ಯ ಫಲವನ್ನು ತ್ಯಜಿಸಿಬಿಟ್ಟಿದ್ದೇನೆಂದು ಯಾವಾಗ ತಿಳಿದುಕೊಳ್ಳಲಿ?**

ನಿನ್ನ ಬುದ್ಧಿಯು ಮೋಹರೂಪೀ ಕೆಸರನ್ನು ದಾಟಿಹೋದಾಗ, ನೀನು ಕೇಳಿದ ಮತ್ತು ಕೇಳಬೇಕಾಗಿ ಬರುವ (ಅನುಭವಿಸಿದ ಮತ್ತು ಅನುಭವಿಸದ) ಭೋಗಗಳಿಂದ ನಿನಗೆ ವೈರಾಗ್ಯವುಂಟಾದಾಗ. ॥೫೨॥

**ವೈರಾಗ್ಯ ಉಂಟಾದಮೇಲೆ ಸಮತ್ವದ ಪ್ರಾಪ್ತಿ ಯಾವಾಗ ಆಗಬಹುದು?**

ಶಾಸ್ತ್ರಗಳ ಅನೇಕ ಸಿದ್ಧಾಂತಗಳಿಂದ, ಮತಭೇದಗಳಿಂದ ವಿಚಲಿತವಾದ ನಿನ್ನ ಬುದ್ಧಿಯು ಜಗತ್ತಿನಿಂದ ಪೂರ್ಣವಾಗಿ ವಿಮುಖಗೊಂಡು ಪರಮಾತ್ಮನಲ್ಲಿ ಅಚಲವಾಗಿ ಹೋದಾಗ ನಿನಗೆ ಯೋಗ - (ಸಾಧ್ಯರೂಪೀ ಸಮತ್ವ) ಪ್ರಾಪ್ತಿಯಾಗಿ ಬಿಡುವುದು. ॥೫೩॥

**ಅರ್ಜುನನು ಕೇಳಿದನು - ಸಮತ್ವಪ್ರಾಪ್ತಿಯಾದ ಸ್ಥಿರಬುದ್ಧಿಯ ಮನುಷ್ಯನ ಲಕ್ಷಣಗಳೇನು?**

ಭಗವಂತ ಹೇಳಿದನು - ಹೇ ಪಾರ್ಥ! ಸಾಧಕನು ಮನಸ್ಸಿನಲ್ಲಿರುವ ಸಂಪೂರ್ಣ ಕಾಮನೆಗಳನ್ನು ತ್ಯಾಗಮಾಡಿ ತನ್ನಿಂದ ತಾನೇ - ತನ್ನಲ್ಲಿ ಸಂತುಷ್ಟನಾಗಿರುವಾಗ ಸ್ಥಿತಪ್ರಜ್ಞ (ಸ್ಥಿರಬುದ್ಧಿಯುಳ್ಳವ) ಎಂದು ಹೇಳಿಸಿಕೊಳ್ಳುವನು. ॥೫೪-೫೫॥

**ಆ ಸ್ಥಿತಪ್ರಜ್ಞನು ಹೇಗೆ ಮಾತನಾಡುತ್ತಾನೆ?**

ಅಯ್ಯಾ! ಅವನು ಮಾತನಾಡುವುದು ಸಾಧಾರಣ ಕ್ರಿಯಾರೂಪದಿಂದಲ್ಲ, ಪ್ರತಿಯಾಗಿ ಭಾವರೂಪದಿಂದ ಇರುತ್ತದೆ. ವರ್ತಮಾನದಲ್ಲಿ ವ್ಯವಹಾರ ಮಾಡುತ್ತಿರುವಾಗ ದುಃಖಿಗಳು ಒದಗಿದರೆ ಯಾರ ಮನಸ್ಸಿನಲ್ಲಿ ಉದ್ವೇಗವುಂಟಾಗುವುದಿಲ್ಲವೋ ಮತ್ತು ಸುಖಗಳುಂಟಾದರೆ ಯಾರ ಮನಸ್ಸಿನಲ್ಲಿ ಸ್ಪೃಹೆಯುಂಟಾಗುವುದಿಲ್ಲವೋ ಹಾಗೂ ಯಾರು ರಾಗ, ಭಯ ಮತ್ತು ಕ್ರೋಧಗಳಿಲ್ಲದವನಾಗಿದ್ದಾನೆಯೋ, ಆ ಮನನಶೀಲ ಮನುಷ್ಯ ಸ್ಥಿತಪ್ರಜ್ಞನೆಂದು ಹೇಳಲ್ಪಡುತ್ತಾನೆ. ಎಲ್ಲದರಲ್ಲಿಯೂ ಆಸಕ್ತಿರಹಿತನಾದ ಯಾವ ಮನುಷ್ಯನು ಪ್ರಾರಬ್ಧಕ್ಕನುಸಾರವಾಗಿ ಅನುಕೂಲ ಪರಿಸ್ಥಿತಿ ಒದಗಿದರೆ ಸಂತೋಷ ಪಡುವುದಿಲ್ಲವೋ ಮತ್ತು ಪ್ರತಿಕೂಲ ಪರಿಸ್ಥಿತಿಯೊದಗಿದರೆ ದ್ವೇಷಿಸುವುದಿಲ್ಲವೋ, ಅವನ ಬುದ್ಧಿ ಸ್ಥಿರವಾಗಿ ಅರ್ಥಾತ್ 'ನಾನು ಪರಮಾತ್ಮಪ್ರಾಪ್ತಿ ಮಾಡಿಕೊಳ್ಳಬೇಕು' ಎಂದು ಅವನು ಮೊದಲು ಮಾಡಿಕೊಂಡಿದ್ದ ಆ ನಿಶ್ಚಯವು ಈಗ ಸಿದ್ಧಿಯಾಗಿದೆ. ॥೫೬-೫೭॥

**ಪರಮಾತ್ಮ! ಆ ಸ್ಥಿತಪ್ರಜ್ಞನು ಹೇಗೆ ಕುಳಿತುಕೊಳ್ಳುತ್ತಾನೆ?**

ಆಮೆಯು ತನ್ನ ನಾಲ್ಕು ಕಾಲುಗಳು ತಲೆ ಮತ್ತು ಬಾಲ - ಈ ಆರು ಅಂಗಗಳನ್ನು ಮುದುರಿಕೊಂಡು ಕುಳಿತುಕೊಳ್ಳುವಂತೆಯೇ, ಆ ಕರ್ಮಯೋಗಿಯು ಎಲ್ಲಾ ಇಂದ್ರಿಯಗಳನ್ನು ಮತ್ತು ಮನಸ್ಸನ್ನು ತಮ್ಮ-ತಮ್ಮ ವಿಷಯಗಳಿಂದ ಮುದುರಿಸಿಕೊಂಡು ಹಿಮ್ಮೆಟ್ಟಿಸುವ ಸಮಯದಲ್ಲಿ ಅವನ ಬುದ್ಧಿ ಸ್ಥಿರವಾಗಿ ಹೋಗುತ್ತದೆ. ॥೫೮॥

**ಇಂದ್ರಿಯಗಳನ್ನು ಮುದುರಿಕೊಳ್ಳುವುದರ ವಾಸ್ತವಿಕ ಗುರುತೇನು ?**

ಇಂದ್ರಿಯಗಳನ್ನು ಅವುಗಳ ವಿಷಯಗಳಿಂದ ಹಿಮ್ಮೆಟ್ಟಿಸುವ ದೇಹಾಭಿಮಾನೀ ಮನುಷ್ಯನಿಗೂ ವಿಷಯಗಳು ನಿವೃತ್ತಿಯಾಗಿಬಿಡುತ್ತವೆ. ಆದರೆ ರಸ ಬುದ್ಧಿ (ಸುಖ-ಭೋಗ) ನಿವೃತ್ತಿಯಾಗುವುದಿಲ್ಲ. ಪರಮಾತ್ಮನ ಸಾಕ್ಷಾತ್ಕಾರ ಉಂಟಾಗುವುದರಿಂದ ಈ ಸ್ಥಿತಪ್ರಜ್ಞ ಮನುಷ್ಯನ ರಸಬುದ್ಧಿಯು ಸಹ ನಿವೃತ್ತಿಯಾಗುತ್ತದೆ. ॥೫೯॥

**ರಸಬುದ್ಧಿ ಇರುವುದರಿಂದ ಹಾನಿಯೇನು ?**

ಎಲೈ ಕುಂತೀನಂದನ! ರಸಬುದ್ಧಿಯಿರುವುದರಿಂದ ಸಾಧನಪರಾಯಣನಾದ ವಿವೇಕೀ ಮನುಷ್ಯನ ಮನಸ್ಸನ್ನು ಸಹ ಪೀಡಿಸುವ ಸ್ವಭಾವವುಳ್ಳ ಇಂದ್ರಿಯಗಳು ಬಲವಂತವಾಗಿ ವಿಷಯಗಳ ಕಡೆಗೆ ಆಕರ್ಷಿಸುತ್ತವೆ. ॥೬೦॥

**ಪರಮಾತ್ಮ ! ಈ ರಸಬುದ್ಧಿಯನ್ನು ನಾಶಮಾಡಲು ಏನು ಮಾಡಬೇಕು ?**

ಕರ್ಮಯೋಗಿಯಾದ ಸಾಧಕನು ಸಂಪೂರ್ಣವಾಗಿ ಇಂದ್ರಿಯಗಳನ್ನು ವಶಪಡಿಸಿಕೊಂಡು ನನ್ನ ಪರಾಯಣನಾಗಿರಲಿ, ಅರ್ಥಾತ್ ನನ್ನ ಭರವಸೆಯಿಂದ ನಿಶ್ಚಿಂತನಾಗಲಿ. ಈ ರೀತಿ ಇಂದ್ರಿಯಗಳು ವಶದಲ್ಲಿರುವವನ ಬುದ್ಧಿಯು ಸ್ಥಿರವಾಗಿರುತ್ತದೆ. ॥೬೧॥

**ನಿನ್ನ ಪರಾಯಣನಾಗದೇ ಇರುವುದರಿಂದ ಏನಾಗುವುದು ?**

ನನ್ನ ಪರಾಯಣನಾಗದಿರುವುದರಿಂದ ವಿಷಯಗಳ (ಸುಖ-ಭೋಗಗಳ) ಚಿಂತನೆಯುಂಟಾಗುವುದು.

**ವಿಷಯಗಳ ಚಿಂತನೆಯಿಂದ ಏನಾಗುವುದು ?**

ಮನುಷ್ಯನಿಗೆ ಆ ವಿಷಯಗಳಲ್ಲಿ ಆಸಕ್ತಿಯುಂಟಾಗುವುದು.

**ಆಸಕ್ತಿಯುಂಟಾಗುವುದರಿಂದ ಏನಾಗುವುದು ?**

ಆ ವಿಷಯಗಳನ್ನು (ಭೋಗಗಳನ್ನು) ಪಡೆದುಕೊಳ್ಳಬೇಕೆಂಬ ಕಾಮನೆಯುಂಟಾಗುವುದು.

**ಕಾಮನೆ ಉಂಟಾಗುವುದರಿಂದ ಏನಾಗುವುದು?**

ಕಾಮನೆಯ ಪೂರ್ತಿಯಲ್ಲಿ ತೊಂದರೆಯಾದರೆ ಕ್ರೋಧವುಂಟಾಗುವುದು. ॥೬೨॥

**ಕ್ರೋಧವುಂಟಾಗುವುದರಿಂದ ಏನಾಗುವುದು?**

ಕೋಪಬರುವುದರಿಂದ ಅಜ್ಞಾನವುಂಟಾಗುವುದು ಅರ್ಥಾತ್ ಮೌಢ್ಯ ಆವರಿಸುವುದು.

**ಮೌಢ್ಯ ಆವರಿಸಿಕೊಳ್ಳುವುದರಿಂದ ಏನಾಗುವುದು ?**

'ನಾನು ಸಾಧಕನಾಗಿದ್ದೇನೆ, ಆದ್ದರಿಂದ ನಾನು ಈ ರೀತಿ ವ್ಯವಹಾರ ಮಾಡಬೇಕು, ಈ ರೀತಿ ಮಾತನಾಡಬೇಕು' ಇತ್ಯಾದಿ ಮೊದಲೇ ಯೋಚಿಸಿದ್ದೆಲ್ಲಾ ಮರೆತು ಹೋಗುವುದು ಅರ್ಥಾತ್ ಅದರ ನೆನಪೇ ಇರುವುದಿಲ್ಲ.

**ಸ್ಮೃತಿ ನಷ್ಟವಾದಾಗ ಏನಾಗುವುದು ?**

ಬುದ್ಧಿ (ಹೊಸ ವಿಚಾರಮಾಡುವ ಶಕ್ತಿ) ನಾಶವಾಗಿ ಹೋಗುವುದು ಅರ್ಥಾತ್ ಈಗ ನಾನು ಏನು ಮಾಡಬೇಕು ಮತ್ತು ಏನು ಮಾಡಬಾರದು - ಎಂಬೀ ವಿವೇಕಶಕ್ತಿ ತಗ್ಗಿಹೋಗುವುದು (ಕುಂಠಿತವಾಗುವದು).

**ಬುದ್ಧಿಯ ನಾಶದಿಂದ ಏನಾಗುವುದು?**

ಆ ಮನುಷ್ಯನ ಪತನವಾಗಿ ಹೋಗುವುದು. ॥೬೩॥

**ಸ್ಥಿತಪ್ರಜ್ಞನು ಕುಳಿತುಕೊಳ್ಳುವ ವಿಚಾರವನ್ನೇನೋ ತಿಳಿಸಿದ್ದಾಯಿತು. ಈಗ ಅವನು ಹೇಗೆ ನಡೆದುಕೊಳ್ಳುತ್ತಾನೆ? ಎಂಬುದನ್ನು ತಿಳಿಸು ?**

ಅಯ್ಯಾ! ಅವನು ನಡೆದುಕೊಳ್ಳುವುದು ಕ್ರಿಯಾರೂಪದಿಂದ ಅಲ್ಲ, ಭಾವ ರೂಪದಿಂದ. ವಶೀಭೂತವಾದ ಅಂತಃಕರಣವುಳ್ಳ ಸಾಧಕನು ರಾಗ-ದ್ವೇಷ ರಹಿತನಾಗಿ ಮತ್ತು ತನ್ನ ವಶಮಾಡಿಕೊಂಡಿರುವ ಇಂದ್ರಿಯಗಳ ಮೂಲಕ ವಿಷಯಗಳನ್ನು ಅನುಭವಿಸುತ್ತಾ ಅಂತಃಕರಣದ ಪ್ರಸನ್ನತೆಯನ್ನು ಪಡೆಯುತ್ತಾನೆ. ॥೬೪॥

**ಅಂತಃಕರಣದ ಪ್ರಸನ್ನತೆಯನ್ನು ಪಡೆದ ನಂತರ ಏನಾಗುತ್ತದೆ ?**

ಆ ಪ್ರಸನ್ನಚಿತ್ತವುಳ್ಳ ಮನುಷ್ಯನ ಎಲ್ಲಾ ದುಃಖಗಳು ಪೂರ್ಣ ನಾಶವಾಗುತ್ತವೆ ಮತ್ತು ಅವನ ಬುದ್ಧಿಯು ಬಹಳ ಬೇಗ ಪರಮಾತ್ಮನಲ್ಲಿ ಸ್ಥಿರವಾಗುತ್ತದೆ. ॥೬೫॥

**ಯಾರ ಬುದ್ಧಿ ಸ್ಥಿರಗೊಳ್ಳುವುದಿಲ್ಲ?**

ಮನಸ್ಸು ಮತ್ತು ಇಂದ್ರಿಯಗಳ ಸಂಯಮವಿಲ್ಲದಿರುವಂತಹ ಮನುಷ್ಯನಿಗೆ ಒಂದು ನಿಶ್ಚಿತಬುದ್ಧಿಯಿರುವುದಿಲ್ಲ. ನಿಶ್ಚಿತವಾದ ಬುದ್ಧಿಯಿಲ್ಲದಿರುವುದರಿಂದ - 'ನಾನು ಕೇವಲ ನನ್ನ ಕರ್ತವ್ಯವನ್ನು ಪಾಲಿಸಬೇಕು' - ಎಂಬ ಭಾವನೆ ಮತ್ತು ವಿಚಾರ ಅವನಿಗೆ ಉಂಟಾಗುವುದಿಲ್ಲ. ಅಂತಹ ಭಾವನೆಯಿಲ್ಲದಿರುವುದರಿಂದ ಅರ್ಥಾತ್ ತನ್ನ ಕರ್ತವ್ಯದ ಪಾಲನೆಯಾಗದ್ದರಿಂದ ಅವನಿಗೆ ಶಾಂತಿ ದೊರೆಯುವುದಿಲ್ಲ. ಅಂದಮೇಲೆ ಅಶಾಂತ ಮನುಷ್ಯನಿಗೆ ಸುಖ ಹೇಗೆ ತಾನೇ ದೊರೆಯಲು ಸಾಧ್ಯ? ॥೬೬॥

**ಸಂಸಾರಿಯಾದವನ ಬುದ್ಧಿ ಸ್ಥಿರವಾಗುವುದೇನೋ ಅಸಂಭವ; ಆದರೆ ಸಾಧಕನಾದವನ ಬುದ್ಧಿ ಸ್ಥಿರವಾಗದಿರುವುದಕ್ಕೆ ಕಾರಣವೇನು?**

ನೀರಿನ ಮೇಲೆ ಚಲಿಸುತ್ತಿರುವ ನಾವೆಯನ್ನು ಗಾಳಿಯು ಅಪಹರಿಸಿಕೊಳ್ಳುವಂತೆ ತಮ್ಮ-ತಮ್ಮ ವಿಷಯಗಳಲ್ಲಿ ಪ್ರವೃತ್ತವಾಗಿರುವ ಸಾಧಕನ ಇಂದ್ರಿಯಗಳಲ್ಲಿ ಒಂದೇ ಇಂದ್ರಿಯವಾದರೂ ಮನಸ್ಸಿನೊಡನೆ ಸೇರಿಕೊಂಡು ಆ ಇಂದ್ರಿಯದೊಡನೆ ಬೆರೆತಿರುವ ಆ ಒಂದೇ ಮನಸ್ಸು ಆ ಸಾಧಕನ ಬುದ್ಧಿಯನ್ನು ಅಪಹರಿಸಿಕೊಳ್ಳುವುದೇ ಕಾರಣವಾಗಿದೆ. ॥೬೭॥

**ಹಾಗಾದರೆ ಯಾರ ಬುದ್ಧಿಯು ಸ್ಥಿರವಾಗುತ್ತದೆ?**

ಹೇ ಮಹಾಬಾಹು! ಯಾರ ಇಂದ್ರಿಯಗಳು ಎಲ್ಲಾ ಪ್ರಕಾರದಿಂದಲೂ ವಶದಲ್ಲಿರುತ್ತವೆಯೋ ಅರ್ಥಾತ್ ಯಾರ ಮನಸ್ಸಿನಿಂದಲೂ ವಿಷಯಗಳ ಚಿಂತನೆ ಆಗುವುದಿಲ್ಲವೋ ಅವನ ಬುದ್ಧಿ ಸ್ಥಿರವಾಗಿರುತ್ತದೆ. ॥೬೮॥

**ಇಂದ್ರಿಯಗಳು ವಶದಲ್ಲಿಲ್ಲದಂತಹ ಸಾಧಾರಣ ಮನುಷ್ಯನಿಗೂ ಮತ್ತು ಇಂದ್ರಿಯಗಳು ವಶದಲ್ಲಿರುವಂತಹ ಸಂಯಮೀ ಮನುಷ್ಯನಿಗೂ ಯಾವ ವ್ಯತ್ಯಾಸವಿದೆ?**

ಸಾಧಾರಣ ಮನುಷ್ಯರ ರಾತ್ರಿಯಲ್ಲಿ ಅರ್ಥಾತ್ ಪರಮಾತ್ಮಪ್ರಾಪ್ತಿಯ ವಿಷಯದಲ್ಲಿ ಪೂರ್ಣವಾಗಿ ಮಲಗಿರುತ್ತಾರೆಯೋ, ಆ ರಾತ್ರಿಯಲ್ಲಿ ಸಂಯಮಿ ಮನುಷ್ಯನು ಎಚ್ಚತ್ತಿರುತ್ತಾನೆ ಅರ್ಥಾತ್ ಪರಮಾತ್ಮ ತತ್ತ್ವದ ಅನುಭವ ಪಡೆಯುತ್ತಾನೆ ಮತ್ತು ಸಾಧಾರಣ ಮನುಷ್ಯರು ಎಚ್ಚತ್ತಿರುವಾಗ ಅರ್ಥಾತ್ ಸುಖ ಭೋಗಗಳನ್ನು ಅನುಭವಿಸುವುದರಲ್ಲಿ ಮತ್ತು ಸಂಗ್ರಹಿಸುವುದರಲ್ಲಿ ಬಹು ಜಾಗರೂಕರಾಗಿ ಎಚ್ಚತ್ತಿರುವಾಗ ಪರಮಾತ್ಮ ತತ್ತ್ವವನ್ನು ತಿಳಿದ ಮನನಶೀಲ ಆ ಮನುಷ್ಯನ ದೃಷ್ಟಿಯಲ್ಲಿ ರಾತ್ರಿಯಾಗಿದೆ, ಕತ್ತಲಾಗಿದೆ. ॥೬೯॥

**ಹಾಗಾದರೆ ಆ ಸಂಯಮೀ ಮನುಷ್ಯರ ಎದುರಿಗೆ ಭೋಗ-ಪದಾರ್ಥಗಳು ಬರದೇ ಇರಬಹುದು?**

ಬರುತ್ತವೆ. ಆದರೆ ತನ್ನ ಮರ್ಯಾದೆಯಲ್ಲಿ ಅಚಲವಾಗಿರುವ ಮತ್ತು ಸುತ್ತಲೂ ನೀರಿನಿಂದ ಪರಿಪೂರ್ಣವಾದ ಸಮುದ್ರಕ್ಕೆ ಎಲ್ಲಾ ನದಿಗಳ ನೀರು ಬಂದು ಸೇರಿಕೊಳ್ಳುತ್ತದೆ. ಆದರೆ ಅದು ಸಮುದ್ರದಲ್ಲಿ ಯಾವ ವಿಕಾರವನ್ನೂ ಉತ್ಪತ್ತಿ ಮಾಡುವುದಿಲ್ಲ, ಅದರಂತೆಯೇ ಆ ಸಂಯಮೀ ಮನುಷ್ಯನ ಮುಂದೆ ಸಾಂಸಾರಿಕ ಭೋಗಗಳೆಲ್ಲವೂ ಬರುತ್ತವೆ, ಆದರೆ ಅವು ಅವನಲ್ಲಿ ಯಾವ ವಿಕಾರವನ್ನೂ

ಉಂಟುಮಾಡುವುದಿಲ್ಲ. ಅಂತಹ ಮನುಷ್ಯನೇ ಪರಮಶಾಂತಿಯನ್ನು (ಪರಮಾತ್ಮ ತತ್ತ್ವ) ಪಡೆಯುತ್ತಾನೆಯೇ ಹೊರತು ಭೋಗಗಳ ಕಾಮನೆಯುಳ್ಳವನಲ್ಲ. ॥೭೦॥

**ಭೋಗಗಳ ಇಚ್ಛೆಯುಳ್ಳವರಿಗೂ ಸಹ ಶಾಂತಿ ಹೇಗೆ ದೊರೆಯುವುದು ?**

ಅವರಿಗಾದರೋ ತ್ಯಾಗದಿಂದಲೇ ಶಾಂತಿ ದೊರೆಯುವುದು. ಎಲ್ಲ ಕಾಮನೆಗಳನ್ನು ಹಾಗೂ ಸ್ಪೃಹೆಯನ್ನು ತ್ಯಾಗಮಾಡಿ ಅಹಂಕಾರ-ಮಮಕಾರದಿಂದ ರಹಿತನಾಗಿ ವರ್ತಿಸುವ ಮನುಷ್ಯನಿಗೆ ಶಾಂತಿ ದೊರೆಯುತ್ತದೆ. ॥೭೧॥

**ಅಹಂಕಾರ ಮಮಕಾರ ರಹಿತನಾದರೆ ಅವನ ಸ್ಥಿತಿ ಎಲ್ಲಿರುತ್ತದೆ ?**

ಅವನ ಸ್ಥಿತಿ ಬ್ರಹ್ಮನಲ್ಲಿರುತ್ತದೆ. ಹೇ ಪಾರ್ಥ ! ಇದೇ ಬ್ರಾಹ್ಮೀ ಸ್ಥಿತಿಯಾಗಿದೆ. ಇದನ್ನು ಪಡೆದುಕೊಂಡ ಮೇಲೆ ಮನುಷ್ಯನು ಮತ್ತೆಂದಿಗೂ ಮೋಹಕ್ಕೊಳಗಾಗುವುದಿಲ್ಲ. ಮನುಷ್ಯನು ಈ ಬ್ರಾಹ್ಮೀ ಸ್ಥಿತಿಯಲ್ಲಿ ಅಂತ್ಯಕಾಲದಲ್ಲಿಯೂ ಸಹ ಸ್ಥಿರವಾಗಿದ್ದರೆ ಅರ್ಥಾತ್ ಅಂತ್ಯಕಾಲದಲ್ಲಿಯೂ ಕೂಡ ಅಹಂಕಾರ-ಮಮಕಾರ ರಹಿತನಾಗಿ ಹೋದರೆ ಅವನು ನಿರ್ವಾಣ (ಶಾಂತ) ಬ್ರಹ್ಮವನ್ನು ಪಡೆದುಕೊಳ್ಳುತ್ತಾನೆ. ॥೭೨॥



# ಮೂರನೇ ಅಧ್ಯಾಯವು

''ಹೇ ಜನಾರ್ದನ ! ಜ್ಞಾನವೇ ಶ್ರೇಷ್ಠ ಎಂಬುದು ನಿನ್ನ ಅಭಿಪ್ರಾಯವಾಗಿರುವುದಾದರೆ, ಹೇ ಕೇಶವ ! ನೀನು ನನ್ನನ್ನು ಘೋರ ಕರ್ಮದಲ್ಲಿ ಏಕೆ ತೊಡಗಿಸುವೆ ? ಹಾಗೂ ನೀನು ಒಮ್ಮೆ ಕರ್ಮ ಮಾಡು - ಎಂದು ಹೇಳುವೆ. ಮತ್ತೊಮ್ಮೆ - ಜ್ಞಾನವನ್ನು ಆಶ್ರಯಿಸು - ಎಂದು ಹೇಳುವೆ. ನಿನ್ನ ಈ ಮಿಶ್ರಿತವಾದ ಮಾತುಗಳಿಂದ ನನ್ನ ಬುದ್ಧಿಯು ಮೋಹಕ್ಕೊಳಪಡುತ್ತಿರುವಂತಿದೆ. ಆದುದರಿಂದ ನಾನು ಶ್ರೇಯಸ್ಸನ್ನು ಪಡೆಯುವಂತಹ ಒಂದು ನಿಶ್ಚಿತವಾದ ಮಾತನ್ನು ಹೇಳು'' ಎಂದು ಅರ್ಜುನನು ಕೇಳಿದನು ॥೧-೨॥

ಪರಮಾತ್ಮ ಹೇಳಿದನು - ಎಲೈ ಪಾಪರಹಿತ ಅರ್ಜುನ ! ಈ ಮಾನವ ಲೋಕದಲ್ಲಿ ಎರಡು ಪ್ರಕಾರದಿಂದ ಆಗುವ ನಿಷ್ಠೆಗಳು ನನ್ನಿಂದ ಈ ಮೊದಲೇ ಹೇಳಲ್ಪಟ್ಟಿವೆ. ಅವುಗಳಲ್ಲಿ ಸಾಂಖ್ಯಯೋಗಿಗಳ ನಿಷ್ಠೆಯು ಜ್ಞಾನಯೋಗದಿಂದಲೂ ಮತ್ತು ಯೋಗಿಗಳ ನಿಷ್ಠೆಯು ಕರ್ಮಯೋಗದಿಂದಲೂ ಜರುಗುತ್ತವೆ ಅರ್ಥಾತ್ ಜ್ಞಾನಯೋಗ ಮತ್ತು ಕರ್ಮಯೋಗದಿಂದಲೂ ಒಂದೇ ಸಮಬುದ್ಧಿ ದೊರೆಯುತ್ತದೆ. ॥೩॥

**ಆ ಸಮತ್ವದ ಪ್ರಾಪ್ತಿಗೆ ಕರ್ಮ ಮಾಡುವುದು ಅನಿವಾರ್ಯವೇ ?**

ಹೌದು, ಅನಿವಾರ್ಯ; ಏಕೆಂದರೆ ಮನುಷ್ಯನು ಕರ್ಮಗಳನ್ನು ಪ್ರಾರಂಭ ಮಾಡದ ಹೊರತು ನಿಷ್ಕರ್ಮತೆಯನ್ನು ಪಡೆಯುವುದಿಲ್ಲ ಮತ್ತು ಕರ್ಮಗಳ ತ್ಯಾಗದಿಂದ ಸಿದ್ಧಿಯನ್ನು ಪಡೆಯುವುದಿಲ್ಲ. ಅಂದರೆ ಆ ಸಮತ್ವದ ಪ್ರಾಪ್ತಿಯು ಕರ್ಮಗಳನ್ನು ಪ್ರಾರಂಭಿಸದ ಹೊರತೂ ಸಹ ಉಂಟಾಗುವುದಿಲ್ಲ ಮತ್ತು ಕರ್ಮಗಳ ತ್ಯಾಗದಿಂದಲೂ ಸಹ ಉಂಟಾಗುವುದಿಲ್ಲ. ॥೪॥

**ಕರ್ಮಗಳ ತ್ಯಾಗದಿಂದ ಏಕೆ ಉಂಟಾಗುವುದಿಲ್ಲ?**

ಯಾವ ಮನುಷ್ಯನೂ ಸಹ ಯಾವ ಅವಸ್ಥೆಯಲ್ಲಿಯೂ ಕ್ಷಣ ಮಾತ್ರವೂ ಕೂಡಾ ಕರ್ಮಮಾಡದೇ ಇರಲಾರನು; ಏಕೆಂದರೆ ಪ್ರಕೃತಿಜನ್ಯಗುಣಗಳು ಸ್ವಭಾವಗಳಿಗೆ ಪರವಶರಾದ ಪ್ರಾಣಿಗಳಿಂದ ಕರ್ಮ ಮಾಡಿಸುತ್ತವೆ. ಹೀಗಿರುವಾಗ ಪ್ರಾಣಿಯು ಕರ್ಮಗಳನ್ನು ಹೇಗೆ ತ್ಯಾಗ ಮಾಡಬಲ್ಲನು ? ॥೫॥

**ಮನುಷ್ಯನು ಸುಮ್ಮನೆ ಕುಳಿತುಕೊಂಡಿದ್ದರೆ, ಏನನ್ನೂ ಸಹ ಮಾಡದೇ ಇದ್ದರೆ, ಇದು ಕರ್ಮಗಳ ತ್ಯಾಗ ಆಗಲಿಲ್ಲವೆ?**

ಇಲ್ಲ, ಸುಮ್ಮನೆ ಕುಳಿತುಕೊಂಡು ಅರ್ಥಾತ್ ಇಂದ್ರಿಯಗಳನ್ನು ಕೇವಲ ಹೊರಗಡೆಯಿಂದ ತಡೆದು ಮನಸ್ಸಿನಲ್ಲಿ ವಿಷಯಗಳ ಬಗ್ಗೆ ಯೋಚಿಸುತ್ತಿರುವ ಮನುಷ್ಯನು ಹೀಗೆ ಸುಮ್ಮನೆ ಕುಳಿತಿರುವುದು ಕರ್ಮಗಳ ತ್ಯಾಗವಾಗುವುದಿಲ್ಲ, ಪ್ರತಿಯಾಗಿ ಆ ಮೂಢಬುದ್ಧಿಯವನ ಈ ಸುಮ್ಮನೆ ಕುಳಿತಿರುವಿಕೆಯು ಮಿಥ್ಯಾಚಾರವಾಗಿರುತ್ತದೆ. ॥೬॥

**ನೀನು ತಿಳಿಸಿದ ಸಮತ್ವಬುದ್ಧಿಯ ಪ್ರಾಪ್ತಿಯು, ಕರ್ಮಗಳನ್ನು ಮಾಡದೆಯೂ ಉಂಟಾಗುವುದಿಲ್ಲ, ಕರ್ಮಗಳ ತ್ಯಾಗದಿಂದಲೂ ಉಂಟಾಗುವುದಿಲ್ಲ ಮತ್ತು ಹೊರಗಿನಿಂದ ಸುಮ್ಮನೆ ಕುಳಿತುಕೊಂಡು ಮನಸ್ಸಿನಲ್ಲಿ ವಿಷಯಗಳ ಚಿಂತನೆ ಮಾಡುತ್ತಿರುವುದರಿಂದಲೂ ಉಂಟಾಗುವುದಿಲ್ಲ. ಹಾಗಾದರೆ ಅದರ (ಸಮತ್ವಬುದ್ಧಿ) ಪ್ರಾಪ್ತಿ ಹೇಗೆ ಆಗುತ್ತದೆ?**

ಎಲೈ ಅರ್ಜುನ! ಯಾವ ಮನುಷ್ಯ ಮನಸ್ಸಿನಿಂದ ಇಂದ್ರಿಯಗಳನ್ನು ನಿಗ್ರಹಿಸಿ ಆಸಕ್ತಿರಹಿತನಾಗಿ ಇಂದ್ರಿಯಗಳ ಮೂಲಕ ಕರ್ಮಯೋಗವನ್ನು (ನಿಷ್ಕಾಮ ಭಾವನೆಯಿಂದ ತನ್ನ ಕರ್ತವ್ಯಕರ್ಮಗಳನ್ನು) ಆಚರಿಸುತ್ತಾನೆಯೋ, ಅವನು ಶ್ರೇಷ್ಠನು ಅರ್ಥಾತ್ ಅವನಿಗೆ ಸಮತ್ವಬುದ್ಧಿ ಪ್ರಾಪ್ತಿಯಾಗಿಬಿಡುತ್ತದೆ. ಆದುದರಿಂದ ನೀನು ಶಾಸ್ತ್ರವಿಧಿಯಂತೆ ನಿಯಮಿಸಿರುವ ಕರ್ತವ್ಯಕರ್ಮವನ್ನು ಮಾಡು. ಏಕೆಂದರೆ ಕರ್ಮ ಮಾಡದೇಯಿರುವುದಕ್ಕಿಂತ ಮೇಲೆ ತಿಳಿಸಿದ ವಿಧಿಯಂತೆ ಕರ್ತವ್ಯಕರ್ಮ ಮಾಡುವುದು ಶ್ರೇಷ್ಠವಾಗಿದೆ. ಮತ್ತಿನ್ನೇನು, ಕರ್ಮ ಮಾಡದೇ ನಿನ್ನ ಶರೀರದ ನಿರ್ವಹಣೆಯೂ ಸಹ ಆಗಲಾರದು. ॥೭-೮॥

**ಭಗವಂತ! ಕರ್ಮಗಳನ್ನು ಮಾಡುವುದರಿಂದ ಬಂಧನವೇನು ಆಗುವುದಿಲ್ಲವೇ?**

ಇಲ್ಲ, ಯಜ್ಞವನ್ನು (ಕರ್ತವ್ಯಕರ್ಮ) ಕೇವಲ ತನಗಾಗಿ ಮಾಡುವುದರಿಂದಲೇ ಮನುಷ್ಯನು ಕರ್ಮಗಳಿಂದ ಬಂಧಿತನಾಗುತ್ತಾನೆ. ಆದುದರಿಂದ ಹೇ ಕುಂತೀ ನಂದನ! ನೀನು ಆಸಕ್ತಿಯನ್ನು ತೊರೆದು ಕೇವಲ ಕರ್ತವ್ಯ-ಪರಂಪರೆಯನ್ನು ಸುರಕ್ಷಿತವಾಗಿ ಇಡುವುದಕ್ಕಾಗಿಯೇ ಯಜ್ಞವನ್ನು (ಕರ್ತವ್ಯಕರ್ಮ) ಮಾಡು. ॥೯॥

**ನಾನು ಕರ್ಮವನ್ನು ಏಕೆ ಮಾಡಲಿ?**

ಅಯ್ಯಾ! ಸರ್ಗದ (ಸೃಷ್ಟಿ) ಆದಿಯಲ್ಲಿ ಪಿತಾಮಹ ಬ್ರಹ್ಮನೂ ಸಹ ಯಜ್ಞಸಹಿತ (ಕರ್ತವ್ಯಕರ್ಮಗಳು) ಮನುಷ್ಯರ ರಚನೆಮಾಡಿ ಅವರಿಗೆ ನೀವುಗಳು ಈ ಕರ್ತವ್ಯಕರ್ಮರೂಪೀ ಯಜ್ಞಗಳ ಮೂಲಕ ಸಿದ್ಧಿಯನ್ನು ಪಡೆಯಿರಿ. ಈ ಯಜ್ಞವು

ನಿಮಗೆ ಕರ್ತವ್ಯಪಾಲನೆಯ ಆವಶ್ಯಕ ಸಾಮಗ್ರಿಗಳನ್ನು ಕೊಡುವಂತಹುದು ಎಂದು ಹೇಳಿದನು. ॥೧೦॥

**ಪಿತಾಮಹ ! ನಾವು ಈ ಯಜ್ಞವನ್ನು ಯಾವ ಭಾವದಿಂದ ಮಾಡಬೇಕು ?**

ಇದರ ಮೂಲಕ ನೀವುಗಳು ದೇವತೆಗಳನ್ನು ತೃಪ್ತಿಪಡಿಸಿರಿ ಮತ್ತು ಆ ದೇವತೆಗಳು ನಿಮ್ಮನ್ನು ವೃದ್ಧಿಪಡಿಸುವರು. ಈ ರೀತಿಯಲ್ಲಿ ಪರಸ್ಪರ ಶ್ರೇಯಸ್ಸಿನಿಂದ ಅರ್ಥಾತ್ ತಮಗೋಸ್ಕರ ಕರ್ಮಮಾಡದೇ ಕೇವಲ ಪರರ ಹಿತಕ್ಕಾಗಿಯೇ ಎಲ್ಲಾ ಕರ್ಮಗಳನ್ನು ಮಾಡುವುದರಿಂದ ನೀವುಗಳು ಪರಮಶ್ರೇಯಸ್ಸನ್ನು (ಪರಮಾತ್ಮನನ್ನು) ಪಡೆದುಕೊಳ್ಳುವಿರಿ. ॥೧೧॥

**ಪಿತಾಮಹ ! ನಾವು ಯಜ್ಞವನ್ನು ಮಾಡದೇಹೋದರೆ?**

ನಿಮ್ಮ ಕರ್ತವ್ಯಕರ್ಮರೂಪೀ ಯಜ್ಞದ ಮೂಲಕ ವೃದ್ಧಿಪಡೆದ ದೇವತೆಗಳು ನೀವುಗಳು ಕೇಳದೇ ಇದ್ದರೂ ನಿಮಗೆ ಕರ್ತವ್ಯಪಾಲನೆಯ ಆವಶ್ಯಕ ಸಾಮಗ್ರಿಯನ್ನು ಕೊಡುತ್ತಿರುವರು; ಆದರೆ ನೀವುಗಳು ಆ ಕರ್ತವ್ಯ-ಪಾಲನೆಯ ಸಾಮಗ್ರಿಗಳಿಂದ ದೇವತೆಗಳನ್ನು ಪುಷ್ಟಿಗೊಳಿಸದೆ ನೀವುಗಳೇ ಸ್ವತಃ ಸುಖ-ಸೌಕರ್ಯಗಳನ್ನು ಅನುಭವಿಸಿದರೆ ನೀವು ಕಳ್ಳರಾಗಿ ಹೋಗುವಿರಿ. ॥೧೨॥

**ಭಗವಂತ ! ಈ ದೋಷದಿಂದ ಬದುಕುಳಿಯುವುದು ಹೇಗೆ ?**

ಅಯ್ಯಾ ! ಕೇವಲ ಇತರರ ಹಿತಕ್ಕಾಗಿಯೇ ಕರ್ತವ್ಯಕರ್ಮ ಮಾಡುವುದರಿಂದ ಯಜ್ಞಶೇಷದ ರೂಪದಲ್ಲಿ ಸಮತ್ವದ ಅನುಭವ ಉಂಟಾಗುತ್ತದೆ. ಆ ಸಮತ್ವದ ಅನುಭವ ಪಡೆಯುವ ಶ್ರೇಷ್ಠ ಮನುಷ್ಯರು ಎಲ್ಲಾ ಪಾಪಗಳಿಂದ ಮುಕ್ತರಾಗಿ ಬಿಡುತ್ತಾರೆ. ಆದರೆ ಕೇವಲ ತಮ್ಮ ಸುಖ-ವಿಶ್ರಾಂತಿಗಳಿಗಾಗಿಯೇ ಎಲ್ಲಾ ಕರ್ಮಗಳನ್ನು ಮಾಡುವ ಪಾಪಿಗಳು ಕೇವಲ ಪಾಪವನ್ನೇ ಸಂಪಾದಿಸಿಕೊಳ್ಳುತ್ತಾರೆ. ॥೧೩॥

**ಪರಮಾತ್ಮ ! ಈಗ ನೀನು ಕರ್ತವ್ಯಕರ್ಮಗಳ ವಿಷಯದಲ್ಲಿ ಬ್ರಹ್ಮನ ಆಜ್ಞೆಯನ್ನು ತಿಳಿಸಿದೆ. ಆದರೆ ಕರ್ತವ್ಯಕರ್ಮಗಳ ವಿಷಯದಲ್ಲಿ ನೀನು - ಏನು ಹೇಳುವೆ ?**

ಈ ವಿಷಯದಲ್ಲಿ - ಸೃಷ್ಟಿ - ಚಕ್ರದ ಸಂಚಾಲನೆಗಾಗಿಯೂ ಸಹ ಕರ್ತವ್ಯಕರ್ಮಗಳನ್ನು ಮಾಡಬೇಕಾದ ಆವಶ್ಯಕತೆಯಿದೆ; ಏಕೆಂದರೆ - ಎಲ್ಲಾ ಪ್ರಾಣಿಗಳೂ ಅನ್ನದಿಂದ ಉತ್ಪತ್ತಿಯಾಗುತ್ತವೆ ಮತ್ತು ಅನ್ನವು ಮಳೆಯಿಂದ ಉತ್ಪತ್ತಿಯಾಗುತ್ತದೆ. ಮಳೆಯು ಯಜ್ಞ (ಕರ್ತವ್ಯಪಾಲನೆ)ದಿಂದ ಆಗುತ್ತದೆ ಮತ್ತು ಯಜ್ಞವು ನಿಷ್ಕಾಮ ಭಾವದಿಂದ ಮಾಡಲ್ಪಟ್ಟ ಕರ್ಮಗಳಿಂದ ನಡೆಯುತ್ತದೆ. ಕರ್ತವ್ಯಕರ್ಮ ಮಾಡುವ ವಿಧಿಯನ್ನು ವೇದಗಳು ತಿಳಿಸುತ್ತವೆ ಮತ್ತು ವೇದಗಳು

ಪರಮಾತ್ಮನಿಂದ ಪ್ರಕಟವಾಗುತ್ತವೆ. ಆದುದರಿಂದ ಸರ್ವವ್ಯಾಪಿ ಪರಮಾತ್ಮನು ಯಜ್ಞ (ಕರ್ತವ್ಯಕರ್ಮ)ದಲ್ಲಿ ಯಾವಾಗಲೂ ಪ್ರತಿಷ್ಠಿತನಾಗಿರುತ್ತಾನೆ ಅರ್ಥಾತ್ ತನ್ನ ಕರ್ತವ್ಯದ ಪಾಲನೆಯಿಂದಲೇ ಆತನ ಸಾಕ್ಷಾತ್ಕಾರ ಉಂಟಾಗುತ್ತದೆ. ಆದುದರಿಂದ ಸೃಷ್ಟಿ-ಚಕ್ರದ ಸುರಕ್ಷತೆಗಾಗಿ ತಮ್ಮ-ತಮ್ಮ ಕರ್ತವ್ಯ ಪಾಲನೆ ಮಾಡುವುದು ಮನುಷ್ಯರಿಗೆ ಬಹಳ ಆವಶ್ಯಕವಾಗಿದೆ ಎಂಬುದೇ ನಾನು ಹೇಳುವುದಾಗಿದೆ. ॥೧೪-೧೫॥

**ಒಂದುವೇಳೆ ಯಾರಾದರೂ ಈ ಸೃಷ್ಟಿ-ಚಕ್ರದ ಸುರಕ್ಷತೆಗಾಗಿ ತಮ್ಮ ಕರ್ತವ್ಯಪಾಲನೆ ಮಾಡದಿದ್ದರೆ ?**

ಹೇ ಪಾರ್ಥ! ಈ ಸೃಷ್ಟಿ-ಚಕ್ರದ ಪರಂಪರೆಯನ್ನು ಸುರಕ್ಷಿತವಾಗಿಡಲು ಕರ್ತವ್ಯಕರ್ಮ ಮಾಡದೇಯಿರುವವನು, ಇಂದ್ರಿಯಗಳ ಮೂಲಕ ಸುಖ-ಭೋಗ ಅನುಭವಿಸುವ ಹಾಗೂ ಪಾಪಮಯ ಜೀವನ ಸಾಗಿಸುವ ಆ ಮನುಷ್ಯನು ಜಗತ್ತಿನಲ್ಲಿ ವ್ಯರ್ಥವಾಗಿಯೇ ಬದುಕುತ್ತಾನೆ ಅರ್ಥಾತ್ ಅವನು ಸತ್ತು ಹೋಗುವುದೇ ಒಳ್ಳೆಯದು. ॥೧೬॥

**ಯಾರಾದರೂ ಆಸಕ್ತಿಯಿಲ್ಲದವರಾಗಿ ಕೇವಲ ನಿನ್ನ ಆಜ್ಞೆಗೆ ಅನುಸಾರವಾಗಿ ಸೃಷ್ಟಿ-ಚಕ್ರದ ಪರಂಪರೆಯನ್ನು ಸುರಕ್ಷಿತವಾಗಿಡುವುದಕ್ಕಾಗಿಯೇ ಕರ್ತವ್ಯಕರ್ಮವನ್ನು ಪಾಲಿಸಿದರೆ ?**

ಅವನು ತಾನು-ತನ್ನಲ್ಲಿಯೇ ರಮಿಸುತ್ತಾನೆ, ತಾನು - ತನ್ನಲ್ಲಿಯೇ ತೃಪ್ತನೂ ಮತ್ತು ಸಂತುಷ್ಟನೂ ಆಗಿಬಿಡುತ್ತಾನೆ. ಪುನಃ ಅವನು ಮಾಡಬೇಕಾಗಿರುವದು ಏನೂ ಉಳಿದಿರುವುದಿಲ್ಲ; ಏಕೆಂದರೆ ಆ ಮಹಾಪುರುಷನಿಗೆ ಈ ಜಗತ್ತಿನಲ್ಲಿ ಕರ್ಮಮಾಡುವುದರಿಂದಲಾಗಲೀ ಅಥವಾ ಕರ್ಮಮಾಡದೇ ಇರುವುದರಿಂದಾಗಲೀ ಯಾವ ಪ್ರಯೋಜನವೂ ಇರುವುದಿಲ್ಲ ಹಾಗೂ ಅವನಿಗೆ ಯಾವ ಪ್ರಾಣಿಯೊಡನೆ ಯಾವ ಸ್ವಾರ್ಥದ ಸಂಬಂಧವೂ ಕೂಡಾ ಇರುವುದಿಲ್ಲ. ॥೧೭-೧೮॥

**ಪರಮಾತ್ಮಾ ! ನಾನೂ ಸಹ ಹೀಗಾಗಬಲ್ಲೆನೆ ?**

ಹೌದು. ಆಗಬಹುದು. ನೀನು ನಿರಂತರ ಆಸಕ್ತಿರಹಿತನಾಗಿ ನಿನ್ನ ಕರ್ತವ್ಯವನ್ನು ಸರಿಯಾಗಿ ಪಾಲಿಸು; ಏಕೆಂದರೆ ಆಸಕ್ತಿರಹಿತನಾಗಿ ಕರ್ತವ್ಯಕರ್ಮ ಮಾಡುವುದರಿಂದ ಮನುಷ್ಯನಿಗೆ ಪರಮಾತ್ಮನ ಪ್ರಾಪ್ತಿ ಉಂಟಾಗುತ್ತದೆ. ॥೧೯॥

**ಮೊದಲು ಯಾರಾದರೂ ಆಸಕ್ತಿರಹಿತರಾಗಿ ಕರ್ಮಮಾಡಿದ್ದಾರೆಯೇ ಮತ್ತು ಅವರಿಗೆ ಪರಮಾತ್ಮನ ಪ್ರಾಪ್ತಿಯಾಗಿದೆಯೇ ?**

ಹೌದು, ರಾಜಾ ಜನಕನಂತಹ ಅನೇಕ ಮಹಾಪುರುಷರು ಕರ್ತವ್ಯಕರ್ಮ ಮಾಡಿಯೇ ಪರಮಾತ್ಮನ ಪ್ರಾಪ್ತಿಯನ್ನು ಪಡೆದುಕೊಂಡಿದ್ದಾರೆ. ಪರಮಾತ್ಮನ

ಪ್ರಾಪ್ತಿಯಾದ ಮೇಲೆಯೂ ಸಹ ಅವರು ಲೋಕಸಂಗ್ರಹಕ್ಕಾಗಿ (ಜಗತ್ತನ್ನು ಕುಮಾರ್ಗದಿಂದ ಪಾರುಮಾಡಿ ಸನ್ಮಾರ್ಗಕ್ಕೆ ತರುವುದಕ್ಕಾಗಿ) ಕರ್ಮಮಾಡಿದ್ದಾರೆ. ಆದುದರಿಂದ ನೀನೂ ಸಹ ಲೋಕಸಂಗ್ರಹವನ್ನು ಗಮನದಲ್ಲಿಟ್ಟುಕೊಂಡು ನಿನ್ನ ಕರ್ತವ್ಯಕರ್ಮವನ್ನು ಪಾಲಿಸು. ॥೨೦॥

**ಆ ಲೋಕಸಂಗ್ರಹ ಹೇಗೆ ಆಗುತ್ತದೆ?**

ಎರಡು ಪ್ರಕಾರದಿಂದ ಆಗುತ್ತದೆ - ತನ್ನ ಕರ್ತವ್ಯಪರಾಯಣತೆಯಿಂದ ಮತ್ತು ತನ್ನ ವಚನಗಳಿಂದ. ಶ್ರೇಷ್ಠ ಮನುಷ್ಯನು ಯಾವ-ಯಾವ ಆಚರಣೆಮಾಡುತ್ತಾನೆಯೋ ಅದರಂತೆಯೇ ಇತರೇ ಮನುಷ್ಯರೂ ಸಹ ಆಚರಣೆಮಾಡುತ್ತಾರೆ. ಅವನು ತನ್ನ ವಚನಗಳಿಂದ ಏನೆಲ್ಲ ಪ್ರಮಾಣಿತನಾಗಿಸುತ್ತಾನೋ ಅದನ್ನು ಇನ್ನಿತರ ಮನುಷ್ಯರೂ ಸಹ ಅನುಕರಣೆ ಮಾಡುತ್ತಾರೆ. ॥೨೧॥

**ನೀನು ಪರಮಾತ್ಮನ ಪ್ರಾಪ್ತಿಯ ವಿಷಯದಲ್ಲಿ ಜನಕಾದಿಗಳ ಉದಾಹರಣೆ ನೀಡಿದೆ, ಅದರಂತೆಯೇ ಲೋಕಸಂಗ್ರಹದ ವಿಷಯದಲ್ಲಿಯೂ ಸಹ ಯಾವುದಾದರೂ ಉದಾಹರಣೆಯಿರುವುದೇ?**

ಹೌದು, ನನ್ನ ಉದಾಹರಣೆಯನ್ನೇ ತೆಗೆದುಕೋ ಪಾರ್ಥ! ಮೂರು ಲೋಕಗಳಲ್ಲಿಯೂ ನನಗಾಗಿ ಯಾವ ಕರ್ತವ್ಯವೂ ಸಹ ಉಳಿದಿಲ್ಲ ಮತ್ತು ಪಡೆದುಕೊಳ್ಳಲು ಯೋಗ್ಯವಾದ ಯಾವ ವಸ್ತುವೂ ದೊರೆಯದೆಯೂ ಇಲ್ಲ. ಆದಾಗ್ಯೂ ಸಹ ನಾನು ಲೋಕಸಂಗ್ರಹಕ್ಕಾಗಿ ಕರ್ತವ್ಯಕರ್ಮ ಮಾಡುತ್ತೇನೆ. ॥೨೨॥

**ಪರಮಾತ್ಮ! ನಿನಗೆ ಕರ್ತವ್ಯಕರ್ಮಮಾಡಬೇಕಾದ ಅವಶ್ಯಕತೆಯೇನಿದೆ?**

ಹೌದು ಪಾರ್ಥ, ಆವಶ್ಯಕತೆಯುಂಟು; ಏಕೆಂದರೆ ಒಂದು ಪಕ್ಷ ನಾನು ನಿರಾಲಸ್ಯವಾಗಿ ಕರ್ತವ್ಯಕರ್ಮಗಳನ್ನು ಮಾಡದೇಹೋದರೆ ಮನುಷ್ಯರೂ ಎಲ್ಲಾ ಪ್ರಕಾರದಿಂದ ನನ್ನ ಮಾರ್ಗವನ್ನೇ ಅನುಸರಿಸುವರು, ಅರ್ಥಾತ್ ಅವರೂ ಸಹ ಕರ್ತವ್ಯ ಕರ್ಮವನ್ನು ಮಾಡುವುದನ್ನು ಬಿಟ್ಟುಬಿಡುವರು. ॥೨೩॥

**ಇದರಿಂದ ಏನಾಗುವುದು ಪರಮಾತ್ಮ?**

ಒಂದುವೇಳೆ ನಾನು ಕರ್ತವ್ಯಕರ್ಮ ಮಾಡದಿದ್ದರೆ, ತಮ್ಮ-ತಮ್ಮ ಕರ್ತವ್ಯಕರ್ಮ ಮಾಡದಿರುವುದರಿಂದ ಈ ಮನುಷ್ಯರೆಲ್ಲಾ ನಷ್ಟ ಭ್ರಷ್ಟರಾಗಿ ಹೋಗುವರು ಮತ್ತು ನಾನು ಎಲ್ಲಾ ಬಗೆಯ ಸಂಕರದೋಷಗಳನ್ನು ಉತ್ಪತ್ತಿಮಾಡುವವನೂ ಹಾಗೂ ಈ ಸಮಸ್ತ ಪ್ರಜೆಗಳನ್ನು ಹಾಳು ಮಾಡುವವನೂ ಆಗುವೆನು. ॥೨೪॥

**ಈ ದೃಷ್ಟಿಯಿಂದ ಲೋಕಹಿತಕ್ಕಾಗಿ ಕರ್ತವ್ಯಕರ್ಮ ಮಾಡಬೇಕಾದದ್ದು ನಿನಗೇನೋ ಬಹಳ ಅವಶ್ಯವಾಗಿದೆ. ಆದರೆ ತತ್ತ್ವಜ್ಞರಾದ ಜೀವನ್ಮುಕ್ತ ಮಹಾ ಪುರುಷರಿಗೂ ಸಹ ಕರ್ತವ್ಯಕರ್ಮ ಮಾಡುವುದು ಆವಶ್ಯಕತೆ ಇದೆಯೇ ?**

ಹೌದು ಅರ್ಜುನ! ಅನಿವಾರ್ಯವೇ ಅಲ್ಲ, ಬಹಳ ಅನಿವಾರ್ಯವಾಗಿದೆ! ಅಜ್ಞಾನೀ ಮನುಷ್ಯರು ಕರ್ಮಗಳಲ್ಲಿ ಆಸಕ್ತರಾಗಿ ಫಲಾಪೇಕ್ಷೆಯಿಂದ ತತ್ಪರತೆಯೊಡನೆ ಕರ್ಮಗಳನ್ನು ಮಾಡುತ್ತಾರೆ, ಅದರಂತೆಯೇ ಆಸಕ್ತಿರಹಿತ ಜ್ಞಾನೀ ಮಹಾಪುರುಷರೂ ಸಹ ಲೋಕಸಂಗ್ರಹಕ್ಕಾಗಿ ತತ್ಪರತೆಯಿಂದ ಕರ್ಮಮಾಡಬೇಕು. ಜ್ಞಾನೀ ಮಹಾಪುರುಷರು ಕರ್ಮಗಳಲ್ಲಿ ಆಸಕ್ತರಾದ ಆ ಅಜ್ಞಾನೀ ಮನುಷ್ಯರ ಬುದ್ಧಿಯಲ್ಲಿ ಯಾವುದೇ ಪ್ರಕಾರದ ಭ್ರಮೆಯನ್ನು ಉಂಟುಮಾಡದೆ ಸ್ವತಃ ತಾವೂ ಸಹ ಬಹು ಜಾಗರೂಕತೆಯಿಂದ ಕರ್ಮಮಾಡಿ ಅವರಿಂದಲೂ ಸಹ ಹಾಗೆಯೇ ಕರ್ಮ ಮಾಡಿಸಬೇಕು. ॥೨೫-೨೬॥

**ಅಜ್ಞಾನಿ ಮತ್ತು ಜ್ಞಾನಿ - ಈ ಇಬ್ಬರು ಕರ್ಮ ಮಾಡುವುದರಲ್ಲಿ ಯಾವ ವ್ಯತ್ಯಾಸವಿದೆ ?**

ಸಂಪೂರ್ಣ ಕರ್ಮಗಳು ಎಲ್ಲಾ ಪ್ರಕಾರದಿಂದಲೂ ಪ್ರಕೃತಿಯ ಗುಣಗಳ ಮೂಲಕ ಮಾಡಲ್ಪಡುತ್ತವೆ. ಆದರೆ ಅಹಂಕಾರದಿಂದ ಮೋಹಿತ ಅಂತಃಕರಣವುಳ್ಳ ಅಜ್ಞಾನೀ ಮನುಷ್ಯನು ''ನಾನು ಕರ್ತಾ'' ಎಂದು ಭಾವಿಸಿಕೊಳ್ಳುತ್ತಾನೆ. ಎಲೈ ಮಹಾಬಾಹು ! ಗುಣ-ವಿಭಾಗ ಮತ್ತು ಕರ್ಮವಿಭಾಗಗಳನ್ನು* ತತ್ತ್ವಶಃ ತಿಳಿದ ಜ್ಞಾನೀ ಮಹಾಪುರುಷರು 'ಸಂಪೂರ್ಣವಾಗಿ ಗುಣಗಳೆಲ್ಲಾ ಗುಣಗಳಲ್ಲಿಯೇ ಪ್ರವರ್ತಿಸುತ್ತವೆ ಅರ್ಥಾತ್ ಸಂಪೂರ್ಣ ಕ್ರಿಯೆಗಳೆಲ್ಲಾ ಪ್ರಕೃತಿಯಲ್ಲಿಯೇ ಜರುಗುತ್ತಿವೆ' ಹೀಗೆ ಅನುಭವ ಪಡೆದು ಅವುಗಳಲ್ಲಿ ಆಸಕ್ತರಾಗುವುದಿಲ್ಲ. ॥೨೭-೨೮॥

**ನಿನ್ನ ಮೇಲೆ ಎಷ್ಟು ಜವಾಬ್ದಾರಿಯಿದೆಯೋ, ಅಷ್ಟೆ ಜವಾಬ್ದಾರಿಯು ಜ್ಞಾನಿಗಳಾದ ಮಹಾಪುರುಷರ ಮೇಲೆಯೂ ಇರುತ್ತದೆಯೇ ?**

ಇಲ್ಲ, ಜ್ಞಾನೀಮಹಾಪುರುಷರು ಅಜ್ಞಾನಿಗಳಂತೆ ಕರ್ಮ ಮಾಡದೇ ಹೋದರೂ ಏನೂ ಚಿಂತೆಯಿಲ್ಲ, ಆದರೆ ಅವರು ಯಾವುದೇ ರೀತಿಯಿಂದಲೂ ಸಹ ಕನಿಷ್ಠಪಕ್ಷ ಪ್ರಕೃತಿಜನ್ಯ ಗುಣಗಳಿಂದ ಮೋಹಿತರಾದ ಮತ್ತು ಗುಣಗಳು ಮತ್ತು ಕರ್ಮಗಳಲ್ಲಿ ಆಸಕ್ತರಾದ ಅಜ್ಞಾನಿಗಳನ್ನು ವಿಚಲಿತಗೊಳಿಸಬಾರದು. ॥೨೯॥

* ಸತ್ತ್ವ, ರಜ ಮತ್ತು ತಮ - ಈ ಮೂರು ಗುಣಗಳ ಕಾರ್ಯವಾಗುವುದರಿಂದ ಶರೀರ, ಇಂದ್ರಿಯಗಳು, ಮನಸ್ಸು, ಬುದ್ಧಿ, ಪ್ರಾಣ, ಪದಾರ್ಥ, ಇತ್ಯಾದಿ ಜಗತ್ತೆಲ್ಲವೂ 'ಗುಣ-ವಿಭಾಗ' ಮತ್ತು ಅದರಲ್ಲಿ ನಡೆಯುವ ಕಾರ್ಯಗಳೆಲ್ಲ 'ಕರ್ಮ-ವಿಭಾಗ'.

**ಪರಮಾತ್ಮಾ ! ಆದರೆ ನಾನೇನೋ ವಿಚಲಿತನಾಗುತ್ತೇನೆ, ಏನು ಮಾಡಲಿ ?**

ನೀನು ವಿವೇಕ - ಬುದ್ಧಿಯ ಮೂಲಕ ಸಂಪೂರ್ಣ ಕರ್ಮಗಳನ್ನು ನನಗೆ ಸಮರ್ಪಿಸಿ ಕಾಮನೆ, ಮಮತೆ ಮತ್ತು ಸಂತಾಪಗಳಿಂದ ಹೊರತಾಗಿ ಯುದ್ಧ (ಕರ್ತವ್ಯ ಕರ್ಮ) ಮಾಡು ॥೩೦॥

**ಕರ್ತವ್ಯ ಕರ್ಮಗಳನ್ನು ಸಂಪೂರ್ಣವಾಗಿ ನಿನಗೆ ಅರ್ಪಿಸುವುದರಿಂದ ಏನಾಗುವುದು ?**

ದೋಷದೃಷ್ಟಿಯಿಲ್ಲದೆ ಶ್ರದ್ಧಾಪೂರ್ವಕ ಯಾವಾಗಲೂ ನನ್ನ ಈ ಅಭಿಪ್ರಾಯಕ್ಕೆ ಅನುಸಾರವಾಗಿ ನಡೆದುಕೊಳ್ಳುವ ಮನುಷ್ಯರ. ಎಲ್ಲಾ ಕರ್ಮಗಳ ಬಂಧನದಿಂದ ಮುಕ್ತರಾಗಿ ಹೋಗುತ್ತಾರೆ. ॥೩೧॥

**ಆದರೆ ನಿನ್ನ ಅಭಿಪ್ರಾಯಕ್ಕೆ ಅನುಗುಣವಾಗಿ ನಡೆದುಕೊಳ್ಳದವರ ಪಾಡೇನು ?**

ನನ್ನ ಈ ಮತದಲ್ಲಿ ದೋಷದೃಷ್ಟಿಯನ್ನಿಟ್ಟು ಅದಕ್ಕನುಗುಣವಾಗಿ ನಡೆದುಕೊಳ್ಳದ, ಸಾಂಸಾರಿಕ ಜ್ಞಾನಗಳಲ್ಲಿ ಮೋಹಿತರಾದ ಮತ್ತು ಪಾರಮಾರ್ಥಿಕ ಜ್ಞಾನದಿಂದರಹಿತರಾದ, ಆ ಅವಿವೇಕೀ ಮನುಷ್ಯರು ನಾಶವಾಗಿ ಹೋದವರೆಂದೇ ನೀನು ತಿಳಿದುಕೋ. ॥೩೨॥

**ನಿನ್ನ ಮತಕ್ಕನುಸಾರ ನಡೆದುಕೊಳ್ಳದವರ ನಾಶ (ಪತನ) ಏಕೆ ಆಗುತ್ತದೆ ?**

ಜ್ಞಾನಿಯಾದರೋ ರಾಗ-ದ್ವೇಷ ರಹಿತವಾದ ತನ್ನ ಶುದ್ಧ ಸ್ವಭಾವಕ್ಕೆ ಅನುಸಾರವಾಗಿ ಕ್ರಿಯೆಮಾಡುತ್ತಾರೆ. ಆದರೆ ಈ ಮನುಷ್ಯರು ರಾಗ-ದ್ವೇಷಗಳಿಂದ ಕೂಡಿದ ತಮ್ಮ ದೂಷಿತ ಸ್ವಭಾವಕ್ಕೆ ಅನುಸಾರವಾಗಿ ಕರ್ಮಮಾಡುತ್ತಾರೆ. ಆದುದರಿಂದ ಶಾಸ್ತ್ರಮರ್ಯಾದೆಗೆ ಅನುಸಾರ ಕರ್ಮ ಮಾಡುವುದು ಅವರ ಅಧೀನವಿರುವುದಿಲ್ಲ, ಇದರಲ್ಲಿ ಬಲವಂತವು ನಡೆಯುವುದಿಲ್ಲ. ಈ ಪ್ರಕಾರ ತಮ್ಮ ದೂಷಿತ ಸ್ವಭಾವಕ್ಕೆ ವಶರಾದ ಕಾರಣ ಅವರ ಪತನವಾಗಿ ಹೋಗುತ್ತದೆ. ॥೩೩॥

**ಭಗವಂತ ! ಈ ಪತನದಿಂದ ಪಾರಾಗಲು ಉಪಾಯವೇನಿದೆ ?**

ಪ್ರತಿಯೊಂದು ಇಂದ್ರಿಯಗಳ ವಿಷಯದಲ್ಲಿ ರಾಗ-ದ್ವೇಷಗಳು, ಅನುಕೂಲತೆ ಮತ್ತು ಪ್ರತಿಕೂಲತೆಗಳ ಮೂಲಕ ಸ್ಥಿರಗೊಂಡಿರುತ್ತವೆ. ಆದುದರಿಂದ ಮನುಷ್ಯರ ರಾಗ-ದ್ವೇಷಗಳಿಗೆ ವಶೀಭೂತರಾಗಿ ಕರ್ಮ ಮಾಡಬಾರದು; ಏಕೆಂದರೆ ಇವು ಎರಡೂ ಮನುಷ್ಯರಿಗೆ ಶತ್ರುಗಳಾಗಿವೆ. ॥೩೪॥

**ಹಾಗಾದರೆ ಮತ್ತೆ ಮನುಷ್ಯರು ಏನು ಮಾಡಬೇಕು ?**

ತಮ್ಮ ಧರ್ಮ (ಕರ್ತವ್ಯ)ದ ಪಾಲನೆಮಾಡಬೇಕು. ಗುಣಗಳಲ್ಲಿ

ಕೊರತೆಯಾಗಿದ್ದರೂ ಸಹ ತಮ್ಮ ಧರ್ಮವೇ ಶ್ರೇಷ್ಠವಾಗಿದೆ. ಸ್ವಧರ್ಮದ ಪಾಲನೆ ಮಾಡುತ್ತಾ ಮರಣವೇ ಉಂಟಾದರೂ ಸಹ ಅದು (ಸ್ವಧರ್ಮ ಪಾಲನೆಯು) ಶ್ರೇಯಸ್ಕರವಾದದ್ದು. ಆದರೆ ಪರಧರ್ಮವು ಎಷ್ಟೇ ಗುಣವುಳ್ಳದ್ದಾದರೂ ಸಹ ಭಯವನ್ನು ಉಂಟು ಮಾಡುವುದಾಗಿದೆ. ॥೩೫॥

**ಅರ್ಜುನ ಹೇಳಿದನು - ತನ್ನ ಧರ್ಮದ ಪಾಲನೆಯೇ ಶ್ರೇಷ್ಠವಾಗಿರುವಾಗ ಮನುಷ್ಯನು ಬಯಸದಿದ್ದರೂ ಸಹ ಬಲವಂತವಾಗಿ ತೊಡಗಿಸಲ್ಪಟ್ಟವನಂತೆ ಯಾವುದರಿಂದ ಪ್ರೇರಿತನಾಗಿ ಅಧರ್ಮವನ್ನೂ, ಪಾಪವನ್ನೂ ಆಚರಿಸುತ್ತಾನೆ ?॥೩೬॥**

ಭಗವಂತ ಹೇಳಿದನು - ರಜೋಗುಣದಿಂದ ಉತ್ಪತ್ತಿಯಾಗುವ ಕಾಮವನ್ನೇ (ಕಾಮನೆ) ನೀನು ಪಾಪ ಮಾಡಿಸುವುದೆಂದು ತಿಳಿದುಕೋ. ಈ ಕಾಮದಿಂದಲೇ ಕ್ರೋಧ ಉಂಟಾಗುತ್ತದೆ. ಈ ಕಾಮವು ಯಾವಾಗಲೂ ಸಹ ತೃಪ್ತಿಯಾಗುವಂತಹುದಲ್ಲ, ಮತ್ತು ಮಹಾಪಾಪಿಯಾಗಿದೆ, ಈ ವಿಷಯದಲ್ಲಿ ನೀನು ಆ ಕಾಮವನ್ನು ವೈರಿಯೆಂದು ತಿಳಿದುಕೋ. ॥೩೭॥

**ಈ ಮಹಾಪಾಪಿಯಾದ ಕಾಮವು ಏನು ಮಾಡುತ್ತದೆ ?**

ಹೊಗೆಯು ಬೆಂಕಿಯನ್ನೂ, ಕೊಳೆಯು ಕನ್ನಡಿಯನ್ನೂ ಮತ್ತು ಜರಾಯುವೆಂಬ ಪೊರೆಯು ಗರ್ಭವನ್ನೂ ಮುಚ್ಚಿಕೊಂಡಿರುತ್ತದೋ, ಅದರಂತೆಯೇ ಈ ಕಾಮವು (ಕಾಮನೆ) ಪಾಪ ಮಾಡದಿರುವ ಇಚ್ಛೆಯನ್ನು ಬದಿಗೊತ್ತಿ ಮನುಷ್ಯನನ್ನು ಪಾಪದಲ್ಲಿ ತೊಡಗಿಸುತ್ತದೆ; ಅಲ್ಲದೆ ಹೇ ಕುಂತೀನಂದನ! ಈ ಕಾಮವು ಅಗ್ನಿಯಂತೆಯೇ ಎಂದಿಗೂ ತೃಪ್ತಿಯಾಗದೇ ಇರುವಂತಹುದು ಮತ್ತು ವಿವೇಕೀ ಸಾಧಕರ ನಿತ್ಯ ವೈರಿಯೂ ಆಗಿದೆ. ಈ ಕಾಮದ ಮೂಲಕ ಮನುಷ್ಯನ ವಿವೇಕವು ಮುಚ್ಚಿಹೋಗುತ್ತದೆ. ॥೩೮-೩೯॥

**ಅಂತಹ ಆ ಕಾಮವು ಎಲ್ಲಿ ಇರುತ್ತದೆ ?**

ಆ ಕಾಮವು ಇಂದ್ರಿಯಗಳು, ಮನಸ್ಸು ಮತ್ತು ಬುದ್ಧಿ - ಈ ಮೂರು ಸ್ಥಾನಗಳಲ್ಲಿ ಇರುತ್ತದೆ ಮತ್ತು ಇಂದ್ರಿಯಾದಿಗಳ ಮೂಲಕ ದೇಹಾಭಿಮಾನೀ ಮನುಷ್ಯರ ಜ್ಞಾನವನ್ನು ಮುಚ್ಚಿ ಅವರನ್ನು ಮೋಹಗೊಳಿಸುತ್ತದೆ. ॥೪೦॥

**ಆ ಕಾಮವನ್ನು ಹೇಗೆ ನಾಶಪಡಿಸಲಾಗುವುದು?**

ಎಲೈ ಭರತವಂಶೀಯರಲ್ಲಿ ಶ್ರೇಷ್ಠ ಅರ್ಜುನ! ನೀನು ಎಲ್ಲಕ್ಕೂ ಮೊದಲು ಇಂದ್ರಿಯಗಳನ್ನು ವಶಮಾಡಿಕೊಂಡು ಈ ಜ್ಞಾನ ಮತ್ತು ವಿಜ್ಞಾನವನ್ನು ಆವರಿಸಿಕೊಳ್ಳುವ ಮಹಾಪಾಪಿ ಕಾಮವನ್ನು ಅವಶ್ಯವಾಗಿ ಕೊಂದು ಹಾಕು. ॥೪೧॥

**ಪರಮಾತ್ಮಾ ! ನೀನು ತಿಳಿಸಿದ ಉಪಾಯವನ್ನು ಕಾರ್ಯಗತ ಮಾಡುವುದು ಹೇಗೆ ?**

ಶರೀರಕ್ಕಿಂತ ಇಂದ್ರಿಯಗಳು ಹೆಚ್ಚಿನವು, ಇಂದ್ರಿಯಗಳಿಗಿಂತ ಮನಸ್ಸು ಹೆಚ್ಚಿನದು, ಮನಸ್ಸಿಗಿಂತ ಬುದ್ಧಿ ಹೆಚ್ಚಿನದು ಮತ್ತು ಬುದ್ಧಿಗಿಂತ ಆತ್ಮ ಹೆಚ್ಚಿನದು, ಈ ರೀತಿ ಆತ್ಮವನ್ನು ಬುದ್ಧಿಗಿಂತ ಹೆಚ್ಚಿನದೆಂದು ತಿಳಿದುಕೊಂಡು ಬುದ್ಧಿಯ ಮೂಲಕ ಮನಸ್ಸನ್ನು ವಶಪಡಿಸಿಕೊಂಡು ಈ ದುರ್ಜಯ ಶತ್ರುವಾದ ಕಾಮವನ್ನು ಕೊಂದುಹಾಕು. ॥೪೨-೪೩॥



# ನಾಲ್ಕನೇ ಅಧ್ಯಾಯವು

**ಈಗ ನೀನು ಕರ್ಮಯೋಗದಲ್ಲಿ ಕಾಮ (ಕಾಮನೆ)ದ ನಾಶಕ್ಕಾಗಿ ಪ್ರೇರಣೆ ಮಾಡಿರುವೆ, ಆ ಕರ್ಮಯೋಗದ ಪರಂಪರೆಯೇನು?**

ಶ್ರೀಕೃಷ್ಣ ಪರಮಾತ್ಮ ಹೇಳಿದನು - ಈ ಅವಿನಾಶೀ ಯೋಗವನ್ನೂ ನಾನು ಮೊಟ್ಟಮೊದಲು ಸೂರ್ಯನಿಗೆ ಹೇಳಿದ್ದೆನು. ನಂತರ ಸೂರ್ಯನು ತನ್ನ ಮಗ ಮನುವಿಗೂ ಮತ್ತು ಮನುವು ತನ್ನ ಮಗ ಇಕ್ಷ್ವಾಕುವಿಗೂ ಹೇಳಿದರು. ಎಲೈ ಪರಂತಪ! ಈ ರೀತಿ ಪರಂಪರೆಯಿಂದ ನಡೆದು ಬಂದಿರುವ ಈ ಯೋಗವನ್ನು ರಾಜರ್ಷಿಗಳು ತಿಳಿದುಕೊಂಡರು. ಆದರೆ ಬಹಳ ಕಾಲ ಗತಿಸಿದ ಕಾರಣ ಆ ಯೋಗವು ಈ ಮಾನವಲೋಕದಲ್ಲಿ ನಶಿಸಿಹೋದಂತಾಗಿದೆ. ನೀನು ನನ್ನ ಭಕ್ತ ಮತ್ತು ಪ್ರಿಯ ಮಿತ್ರನಾಗಿರುವೆ ಆದುದರಿಂದ ಅದೇ ಪುರಾತನ ಯೋಗವನ್ನು ಇಂದು ನಾನು ನಿನಗೆ ಹೇಳಿದ್ದೇನೆ. ಅದು ಬಹು ಉತ್ತಮವಾದ ರಹಸ್ಯದ ವಿಚಾರವಾಗಿದೆ. ||೧-೨||

**ಆದರೆ ಪರಮಾತ್ಮಾ ! ನೀನು ಯಾವ ಸೂರ್ಯನಿಗೆ ಉಪದೇಶ ಮಾಡಿದ್ದೆಯೋ, ಅವನಾದರೋ ಬಹಳ ಮೊದಲೇ ಹುಟ್ಟಿದ್ದವನು. ನಿನ್ನ ಜನ್ಮವಾದರೂ (ಅವತಾರ) ಇತ್ತೀಚಿನದು. ಆದುದರಿಂದ ಸೃಷ್ಟಿಯ ಆರಂಭದಲ್ಲಿ ನೀನೇ ಸೂರ್ಯನಿಗೆ ಉಪದೇಶಮಾಡಿದ್ದೆ ಎಂದು ನಾನು ಇದನ್ನು ಹೇಗೆ ತಿಳಿಯಲಿ? ಎಂದು ಅರ್ಜುನ ಕೇಳಿದನು. ||೪||**

ಭಗವಂತ ಹೇಳಿದನು - ಎಲೈ ಪರಂತಪ ಅರ್ಜುನ! ಈ ಮಾತು ನನ್ನ ಈ ಜನ್ಮ (ಅವತಾರ)ದ್ದಲ್ಲ. ನನ್ನ ಮತ್ತು ನಿನ್ನ ಬಹಳಷ್ಟು ಜನ್ಮಗಳು ಆಗಿಹೋಗಿವೆ. ಅವುಗಳನ್ನೆಲ್ಲಾ ನಾನು ಬಲ್ಲೆನು ಅರ್ಥಾತ್ ಯಾವ - ಯಾವ ಜನ್ಮದಲ್ಲಿ ನಾನು ಮತ್ತು ನೀನು ಏನೇನು ಮಾಡಿದೆವು, ಆ ಎಲ್ಲಾ ವಿಚಾರಗಳನ್ನೂ ನಾನು ತಿಳಿದಿದ್ದೇನೆ, ಆದರೆ ನಿನ್ನ ಜನ್ಮಗಳನ್ನು ಮತ್ತು ಕರ್ಮಗಳನ್ನು ನೀನು ತಿಳಿದಿಲ್ಲ. ||೫||

**ನನ್ನ ಜನ್ಮ ಆಗಿರುವಂತೆಯೇ, ನಿನ್ನ ಜನ್ಮವೂ ಆಗಲಿಲ್ಲವೇ ?**

ಇಲ್ಲವಪ್ಪಾ! ನಾನು ಅಜನ್ಮಾ, ಅವಿನಾಶೀ ಹಾಗೂ ಸಂಪೂರ್ಣವಾಗಿ ಜೀವಿಗಳಿಗೆಲ್ಲಾ ಒಡೆಯನಾಗಿರುತ್ತಾ ನನ್ನ ಪ್ರಕೃತಿಯನ್ನು ವಶಮಾಡಿಕೊಂಡು ನನ್ನ ಯೋಗ ಮಾಯೆಯಿಂದ ಪ್ರಕಟವಾಗುತ್ತೇನೆ. ||೬||

**ನೀನು ಪ್ರಕಟವಾಗುವ ಸಂದರ್ಭ ಯಾವುದು ?**

ಹೇ ಭರತವಂಶೀ ಅರ್ಜುನ ! ಎಂದೆಂದು ಧರ್ಮಕ್ಕೆ ಹಾನಿ ಮತ್ತು ಅಧರ್ಮದ ವೃದ್ಧಿ ಉಂಟಾಗುತ್ತದೋ ಆಗಾಗ ನಾನು ಅವತಾರ ತಾಳುತ್ತೇನೆ.' ॥೭॥

**ನೀನು ಅವತಾರ ತಾಳುವುದರ ಪ್ರಯೋಜನವೇನು?**

ಸಾಧುಗಳ (ಭಕ್ತರ) ರಕ್ಷಣೆ, ದುಷ್ಟರ ವಿನಾಶ ಮತ್ತು ಧರ್ಮವನ್ನು ಚೆನ್ನಾಗಿ ಸ್ಥಾಪನೆ ಮಾಡಲು ನಾನು ಯುಗ-ಯುಗಗಳಲ್ಲಿ ಅವತಾರ ತಾಳುತ್ತೇನೆ. ॥೮॥

**ಈ ರೀತಿ ಪದೇ-ಪದೇ ಜನ್ಮ (ಅವತಾರ) ತಾಳುವುದರಿಂದ ನೀನು ಬಂಧಿತನಾಗುವುದಿಲ್ಲವೇ ?**

ಇಲ್ಲ ಅರ್ಜುನ, ನನ್ನ ಜನ್ಮ ಮತ್ತು ಕರ್ಮಗಳು ದಿವ್ಯವಾಗಿವೆ. ಅಲ್ಲದೆ ನನಗಾಗಿ ಕಿಂಚಿತ್ತೂ ಸಹ ಸ್ವಾರ್ಥವನ್ನಿಟ್ಟುಕೊಳ್ಳದೆ ಕೇವಲ ಜಗತ್ತಿನ ಹಿತಕ್ಕಾಗಿಯೇ ನಾನು ಪ್ರಕಟನಾಗುತ್ತೇನೆ. ಇದನ್ನು ತತ್ತ್ವದಿಂದ ತಿಳಿದುಕೊಳ್ಳುವ ಮನುಷ್ಯ ಶರೀರದಿಂದ ಬಿಡುಗಡೆಯಾದ ನಂತರ ಪುನರ್ಜನ್ಮ ಪಡೆಯದೆ ನನ್ನನ್ನೇ ಪಡೆಯುತ್ತಾನೆ. ॥೯॥

**ನಿನ್ನನ್ನೇ ಪಡೆಯುತ್ತಾನೆ - ಎಂಬುದಕ್ಕೆ ಯಾವುದಾದರೂ ಪ್ರಮಾಣ ಉಂಟೇ ?**

ಹೌದು, ನನ್ನಲ್ಲಿಯೇ ತಲ್ಲೀನ ಮತ್ತು ನನಗೇ ಆಶ್ರಿತನಾಗಿರುವಂತಹ ಬಹಳಷ್ಟು ಮನುಷ್ಯರು ಜ್ಞಾನದಿಂದ ಅರ್ಥಾತ್ ನನ್ನ ಜನ್ಮ ಮತ್ತು ಕರ್ಮ ದಿವ್ಯತೆಯನ್ನು ತತ್ತ್ವದಿಂದ ಅರಿತು ಪವಿತ್ರರಾಗಿ ಹಾಗೂ ರಾಗ, ಭಯ ಮತ್ತು ಕ್ರೋಧಗಳಿಲ್ಲದವರಾಗಿ ನನ್ನನ್ನು ಪಡೆದಿದ್ದಾರೆ. ॥೧೦॥

**ಅವರು ಯಾವ ಭಾವದಿಂದ ನಿನ್ನಲ್ಲಿ ಶರಣಾಗುತ್ತಾರೆ ?**

ಹೇ ಪಾರ್ಥ! ಯಾವ ಮನುಷ್ಯರು ಸಂಸಾರದಿಂದ ವಿಮುಖರಾಗಿ ಯಾವ ಭಾವನೆಯಿಂದ ನನಗೆ ಶರಣಾಗುತ್ತಾರೆಯೋ, ನಾನೂ ಸಹ ಅದೇ ಭಾವದಿಂದ (ಅದರಂತೆಯೇ) ಅವರೊಡನೆ ನಡೆದುಕೊಳ್ಳುತ್ತೇನೆ. ನನ್ನ ಈ ವರ್ತನೆಯು ಸಂಸಾರ ಮಾತ್ರದ ಮನುಷ್ಯರ ಮೇಲೆ ಬಹಳ ಪರಿಣಾಮ ಬೀರುತ್ತದೆ. ಅದರಿಂದ ಅವರೂ ಸಹ ಸ್ವಾರ್ಥ ಮತ್ತು ಅಭಿಮಾನವನ್ನು ತ್ಯಜಿಸಿ ಪರರಿಗೆ ಹಿತಮಾಡುವುದರಲ್ಲಿ ತತ್ಪರರಾಗುತ್ತಾರೆ. ॥೧೧॥

**ನೀನು ತನಗೆ ಶರಣಾದವರಿಗೆ ಇಷ್ಟು ಅನುಕೂಲಕರನಾಗಿರುತ್ತೀಯೆ ; ಆದಾಗ್ಯೂ ಸಹ ಮನುಷ್ಯರು ನಿನ್ನನ್ನು ಬಿಟ್ಟು ದೇವತೆಗಳನ್ನು ಏಕೆ ಆರಾಧಿಸುತ್ತಾರೆ ?**

ಅವರೊಳಗೆ ಸಂಸಾರದ ಮಹತ್ತ್ವವಿರುವುದರಿಂದ ಅವರು ಕರ್ಮದಿಂದ

ಉತ್ಪತ್ತಿಯಾಗುವ ಸಿದ್ಧಿಯನ್ನು ಬಯಸುತ್ತಾರೆ. ಆದುದರಿಂದ ಅವರು ನನ್ನನ್ನು ಬಿಟ್ಟು ದೇವತೆಗಳನ್ನು ಆರಾಧಿಸುತ್ತಾರೆ; ಏಕೆಂದರೆ ಈ ಮನುಷ್ಯ ಲೋಕದಲ್ಲಿ ಕರ್ಮದಿಂದ ಉತ್ಪತ್ತಿಯಾಗುವ ಸಿದ್ಧಿಯು ಬೇಗ ದೊರೆಯುತ್ತದೆ. ॥೧೨॥

**ಮನುಷ್ಯರು ಕರ್ಮದಿಂದ ಉತ್ಪತ್ತಿಯಾಗುವ ಸಿದ್ಧಿಯ ಉದ್ದೇಶದಿಂದ ದೇವತೆಗಳ ಆರಾಧನೆ ಮಾಡುತ್ತಾರೆ ಅರ್ಥಾತ್ ಶುಭಕರ್ಮ ಮಾಡುತ್ತಾರೆ, ಅದರಂತೆಯೇ ನೀನೂ ಸಹ ಯಾವುದಾದರೂ ಫಲದ ಉದ್ದೇಶದಿಂದ ಯಾವುದಾದರೂ ಕಾರ್ಯ ಮಾಡುತ್ತಿರಬಹುದೇ ?**

ನಾನು ಜೀವಿಗಳ ಗುಣಗಳಿಗೆ ಮತ್ತು ಕರ್ಮಗಳಿಗೆ ಅನುಗುಣವಾಗಿ ನಾಲ್ಕು ವರ್ಣಗಳನ್ನು (ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ) ರಚಿಸುತ್ತೇನೆ. ಆದರೆ ನಾನು ಈ ಸೃಷ್ಟಿ ರಚನೆಯೇ ಮುಂತಾದ ಕಾರ್ಯಗಳನ್ನು ಕರ್ತೃತ್ವ ಮತ್ತು ಫಲಾಪೇಕ್ಷೆಗಳಿಲ್ಲದವನಾಗಿಯೇ ಮಾಡುತ್ತೇನೆ. ಆದುದರಿಂದ ಆ ಕರ್ಮಗಳು ನನ್ನನ್ನು ಬಂಧಿಸುವುದಿಲ್ಲ. ಅಷ್ಟೇ ಅಲ್ಲಾ, ಈ ಪ್ರಕಾರ ನನ್ನನ್ನು ತತ್ತ್ವದಿಂದ ತಿಳಿದುಕೊಳ್ಳುವವರೂ ಸಹ ಕರ್ಮಗಳಿಂದ ಎಂದಿಗೂ ಬಂಧಿತರಾಗುವುದಿಲ್ಲ*. ॥೧೩-೧೪॥

**ಈ ಪ್ರಕಾರ ಕರ್ಮ ಮಾಡಿರುವವರು ಯಾರಾದರೂ ಇದ್ದಾರೆಯೇ ?**

ಪೂರ್ವಕಾಲದಲ್ಲಿ ಮುಮುಕ್ಷುಗಳಾಗಿರುವವರೂ ಸಹ ಈ ಪ್ರಕಾರ (ಕರ್ಮಗಳ ತತ್ತ್ವವನ್ನು) ತಿಳಿದುಕೊಂಡು ಕರ್ಮ ಮಾಡಿದ್ದಾರೆ. ಆದುದರಿಂದ ನೀನೂ ಸಹ ಪೂರ್ವಜರಿಂದ ಯಾವಾಗಲೂ ಮಾಡಿಕೊಂಡು ಬಂದಿರುವ ಕರ್ಮಗಳನ್ನು ಅವರಂತೆಯೇ ಮಾಡು. ॥೧೫॥

**ಯಾವ ಕರ್ಮವನ್ನು ಮುಮುಕ್ಷುಗಳು ಮಾಡಿದ್ದಾರೆಯೋ ಮತ್ತು ಯಾವ ಕರ್ಮವನ್ನು ಮಾಡುವುದಕ್ಕೆ ನೀನು ಆಜ್ಞೆ ಮಾಡುತ್ತಿರುವೆಯೋ, ಆ ಕರ್ಮ ಯಾವುದು ?**

ಕರ್ಮ ಯಾವುದು ಮತ್ತು ಅಕರ್ಮ ಯಾವುದು - ಈ ವಿಷಯದಲ್ಲಿ ದೊಡ್ಡ, ದೊಡ್ಡ ವಿದ್ವಾಂಸರೂ ಸಹ ಮೋಹಿತರಾಗುತ್ತಾರೆ. ಈಗ ನಾನು ಅದೇ ಕರ್ಮ ತತ್ತ್ವವನ್ನು ನಿನಗೆ ತಿಳಿಸುತ್ತೇನೆ. ಅದನ್ನು ತಿಳಿದುಕೊಂಡು ನೀನು ಸಂಸಾರ ಬಂಧನದಿಂದ ಮುಕ್ತನಾಗುವೆ. ಆ ಕರ್ಮ ಮೂರು ಪ್ರಕಾರದ್ದಾಗಿದೆ - ಕರ್ಮ,

* ಭಗವಂತನು ಫಲಾಪೇಕ್ಷೆಯಿಲ್ಲದೆ ಕರ್ಮಮಾಡುವಂತೆಯೇ ನಾವೂ ಸಹ ಫಲದ ಇಚ್ಛೆಯನ್ನು ಬಿಟ್ಟು ಕರ್ಮ ಮಾಡಬೇಕಾಗಿದೆ - ಈ ಪ್ರಕಾರ ತಿಳಿದುಕೊಂಡು ಕರ್ಮಮಾಡುವವನು ಕರ್ಮಗಳಿಂದ ಬಂಧಿತನಾಗುವುದಿಲ್ಲ.

ಅಕರ್ಮ ಮತ್ತು ವಿಕರ್ಮ. ಈ ಮೂರರ ತತ್ತ್ವವನ್ನು ಅಗತ್ಯವಾಗಿ ತಿಳಿದುಕೊಳ್ಳಬೇಕು. ಏಕೆಂದರೆ ಕರ್ಮಗಳ ತತ್ತ್ವವು ಬಹಳ ಗಹನ (ಆಳ) ವಾಗಿದೆ. ॥೧೬-೧೭॥

**ಕರ್ಮ ಮತ್ತು ಅಕರ್ಮಗಳ ತತ್ತ್ವವನ್ನು ತಿಳಿಯುವುದು ಎಂದರೇನು ?**

ಕರ್ಮದಲ್ಲಿ ಅಕರ್ಮವನ್ನೂ ನೋಡುವುದು ಮತ್ತು ಅಕರ್ಮದಲ್ಲಿ ಕರ್ಮವನ್ನು ನೋಡುವುದು ಅರ್ಥಾತ್ ಕರ್ಮಮಾಡುತ್ತಾ ನಿರ್ಲಿಪ್ತನಾಗಿರುವುದು ಮತ್ತು ನಿರ್ಲಿಪ್ತನಾಗಿರುತ್ತಾ ಕರ್ಮಮಾಡುವುದು - ಈ ರೀತಿಯಿಂದ ಕರ್ಮಗಳನ್ನೆಲ್ಲಾ ಮಾಡುವವನೇ ಯೋಗಿಯಾಗಿದ್ದಾನೆ, ಬುದ್ಧಿವಂತನಾಗಿದ್ದಾನೆ. ॥೧೮॥

**ಆ ಬುದ್ಧಿವಂತಿಕೆ ಏನು ?**

ಯಾರ ಕರ್ಮಗಳೆಲ್ಲಾ ಸಂಕಲ್ಪ ಉದ್ದೇಶ ಮತ್ತು ಕಾಮನೆಗಳಿಲ್ಲದೆ ಆಗುತ್ತವೋ ಹಾಗೂ ಯಾರ ಕರ್ಮಗಳೆಲ್ಲವೂ ಜ್ಞಾನಾಗ್ನಿಯಿಂದ ಭಸ್ಮವಾಗಿ ಹೋಗಿರುತ್ತವೆಯೋ ಅವನನ್ನು ಜ್ಞಾನಿಗಳೂ ಸಹ ಪಂಡಿತ (ಬುದ್ಧಿವಂತ) ಎಂದು ಹೇಳುತ್ತಾರೆ. ಅರ್ಥಾತ್ ಇದೇ ಅವನ ಬುದ್ಧಿವಂತಿಕೆಯಾಗಿದೆ. ॥೧೯॥

**ಅಂತಹ ಪುರುಷನ ಸ್ಥಿತಿ ಏನಾಗುತ್ತದೆ ?**

ಅವನು ಕರ್ಮ ಹಾಗೂ ಕರ್ಮಫಲದ ಆಸಕ್ತಿಯಿಂದ ಮತ್ತು ಅವುಗಳ ಆಶ್ರಯಗಳಿಂದ ರಹಿತನಾಗುತ್ತಾನೆ. ಹಾಗೂ ಸದಾ ತೃಪ್ತನಾಗಿರುತ್ತಾನೆ. ಆದುದರಿಂದ ಅವನು ಎಲ್ಲವನ್ನೂ ಮಾಡುತ್ತಿದ್ದರೂ ಸಹ ವಾಸ್ತವದಲ್ಲಿ ಏನನ್ನೂ ಸಹ ಮಾಡುವುದಿಲ್ಲ. ॥೨೦॥

**ಒಂದು ಪಕ್ಷ ಯಾವನಾದರೂ ಸಾಧಕನು ನಿವೃತ್ತಿ-ಪರಾಯಣನಾದರೆ ?**

ಶರೀರ ಮತ್ತು ಅಂತಃಕರಣವನ್ನು ವಶದಲ್ಲಿಟ್ಟುಕೊಳ್ಳುವವನು, ಎಲ್ಲಾ ಪ್ರಕಾರದ ಸಂಗ್ರಹವನ್ನು ತ್ಯಜಿಸುವವನು ಮತ್ತು ಸಂಸಾರದ ಆಸೆ-ಆಕಾಂಕ್ಷೆಗಳಿಲ್ಲದ ಸಾಧಕನು ಕೇವಲ ಶರೀರ ಸಂಬಂಧೀ ಕರ್ಮ ಮಾಡುತ್ತಾ ಇದ್ದರೂ ಸಹ ಬಂಧಿತನಾಗುವುದಿಲ್ಲ. ॥೨೧॥

**ಒಂದು ವೇಳೆ ಯಾವನಾದರೂ ಸಾಧಕನು ಪ್ರವೃತ್ತಿ-ಪರಾಯಣನಾದರೆ ?**

ಅವನೂ ಸಹ ಎಂತಹ ಪರಿಸ್ಥಿತಿ ಒದಗಿದರೂ ಅದರಲ್ಲಿಯೇ ಸಂತುಷ್ಟ ನಾಗಿರುತ್ತಾನೆ, ಈರ್ಷ್ಯೆ ಮತ್ತು ದ್ವಂದ್ವಗಳಿಲ್ಲದವನಾಗುತ್ತಾನೆ ಹಾಗೂ ಸಿದ್ಧಿ - ಅಸಿದ್ಧಿಯಲ್ಲಿ ಸಮಾನ ಭಾವನೆಯಿಂದಿರುತ್ತಾನೆ. ಕರ್ಮ ಮಾಡಿಯೂ ಸಹ ಬಂಧಿತನಾಗುವುದಿಲ್ಲ, ಅಷ್ಟೇ ಅಲ್ಲ, ಆಸಕ್ತಿಯಿಲ್ಲದವನು ಮತ್ತು ಸ್ವಾಧೀನ ನಾಗಿರುವವನು ಹಾಗೂ ಕೇವಲ ಪರಮಾತ್ಮನ ಸಾಕ್ಷಾತ್ಕಾರವನ್ನೇ ತನ್ನ

ನಿಶ್ಚಯಮಾಡಿಕೊಂಡಿರುವವನು, ಕೇವಲ ಯಜ್ಞಕ್ಕಾಗಿಯೇ ಕರ್ಮ ಮಾಡುವಂತಹ ಆ ಸಾಧಕನ ಸಂಪೂರ್ಣ ಕರ್ಮಗಳೆಲ್ಲಾ ವಿಲೀನ (ಅಕರ್ಮ)ವಾಗಿ ಹೋಗುತ್ತವೆ. ॥೨೨-೨೩॥

**ಪರಮಾತ್ಮಾ ! ಆ ಯಜ್ಞಗಳು ಎಷ್ಟು ಪ್ರಕಾರವಾಗಿವೆ?**

೧. ಯಾವ ಯಜ್ಞದಲ್ಲಿ ಎಲ್ಲಾ ಕರಣ, ಉಪಕರಣ, ಸಾಮಗ್ರಿ, ಕ್ರಿಯೆ, ಕರ್ತಾ ಇತ್ಯಾದಿ ಸಂಪೂರ್ಣವಾಗಿ ಬ್ರಹ್ಮ ಸ್ವರೂಪವಾಗಿರುತ್ತವೆಯೋ, ಅದು 'ಬ್ರಹ್ಮ ಯಜ್ಞವಾಗಿದೆ'.

೨. ಯಾವುದರಲ್ಲಿ ಪದಾರ್ಥಗಳು, ಕ್ರಿಯೆ ಇತ್ಯಾದಿಗಳೆಲ್ಲವೂ ನನಗೆ ಅರ್ಪಿಸಲಾಗುತ್ತವೆಯೋ, ಅದು 'ಭಗವದರ್ಪಣರೂಪೀ ಯಜ್ಞವಾಗಿದೆ'.

೩. ಯಾವುದರಲ್ಲಿ ಸಾಧಕನು ತಾನು ತನ್ನನ್ನು ಬ್ರಹ್ಮನಲ್ಲಿ ಒಂದಾಗಿಸಿ ಮಾಡಿಬಿಡುತ್ತಾನೆಯೋ, ಅದು 'ಅಭಿನ್ನತಾ ರೂಪೀ ಯಜ್ಞವಾಗಿದೆ'.

೪. ಯಾವುದರಲ್ಲಿ ಸಾಧಕನು ತನ್ನ ಇಂದ್ರಿಯಗಳನ್ನೆಲ್ಲಾ ಸಂಯಮ ಮಾಡಿಕೊಂಡು, ಅವುಗಳನ್ನು ಅವುಗಳ ವಿಷಯಗಳಿಂದ ಹಿಮ್ಮೆಟ್ಟಿಸಿರುತ್ತಾನೆಯೋ, ಅದು 'ಸಂಯಮರೂಪೀ ಯಜ್ಞವಾಗಿದೆ'.

೫. ಯಾವುದರಲ್ಲಿ ಸಾಧಕನು ರಾಗ-ದ್ವೇಷರಹಿತವಾದ ಇಂದ್ರಿಯಗಳಿಂದ ವಿಷಯಗಳನ್ನು ಉಪಭೋಗಿಸುತ್ತಾನೆಯೋ, ಅದು 'ವಿಷಯ - ಹವನರೂಪೀ ಯಜ್ಞವಾಗಿದೆ'.

೬. ಪ್ರಾಣಗಳ, ಇಂದ್ರಿಯಗಳ ಮತ್ತು ಮನಸ್ಸಿನ ಕ್ರಿಯೆಗಳನ್ನು ತಡೆದು ಬುದ್ಧಿಯ ಜಾಗೃತಿಯಾಗಿರುತ್ತಾ ನಿರ್ವಿಕಲ್ಪವಾಗುವುದೇ 'ಸಮಾಧಿ ರೂಪೀ ಯಜ್ಞವಾಗಿದೆ'.

೭. ಲೋಕೋಪಕಾರಕ್ಕಾಗಿ ತನ್ನ ಹಣವನ್ನು ಖರ್ಚುಮಾಡುವುದು 'ದ್ರವ್ಯ ಯಜ್ಞವಾಗಿದೆ'.

೮. ತನ್ನ ಧರ್ಮದ ಪಾಲನೆಯಲ್ಲಿ ಬರುವ ತೊಂದರೆಯನ್ನು ಸಂತೋಷ ಪೂರ್ವಕ ಸಹಿಸುವುದು 'ತಪೋ ಯಜ್ಞವಾಗಿದೆ'.

೯. ಕಾರ್ಯದ ಸಫಲತೆ ಮತ್ತು ಅಸಫಲತೆಯಲ್ಲಿ ಹಾಗೂ ಫಲದ - ಪ್ರಾಪ್ತಿ ಅಥವಾ ಅಪ್ರಾಪ್ತಿಯಲ್ಲಿ ಸಮಾನವಾಗಿರುವುದು 'ಯೋಗ ಯಜ್ಞವಾಗಿದೆ'.

೧೦. ಸತ್-ಶಾಸ್ತ್ರಗಳನ್ನು ಓದುವುದು-ಓದಿಸುವುದು ಹಾಗೂ ನಾಮ-ಜಪ ಮಾಡುವುದು ಇತ್ಯಾದಿ 'ಸ್ವಾಧ್ಯಾಯರೂಪೀ ಜ್ಞಾನಯಜ್ಞವಾಗಿದೆ'.

೧೧. ಪೂರಕ, ಕುಂಭಕ ಮತ್ತು ರೇಚಕ ಪೂರ್ವಕ* ಪ್ರಾಣಾಯಾಮ ಮಾಡುವುದು 'ಪ್ರಾಣಾಯಾಮರೂಪೀ ಯಜ್ಞವಾಗಿದೆ'.

೧೨. ನಿಯಮಿತ ಆಹಾರ ಸೇವಿಸುತ್ತಾ ಪ್ರಾಣವಾಯುಗಳನ್ನು ತಮ್ಮ-ತಮ್ಮ ಸ್ಥಾನಗಳಲ್ಲಿ ತಡೆದಿಡುವುದು 'ಸ್ತಂಭವೃತ್ತಿ ಪ್ರಾಣಾಯಾಮ ರೂಪೀ ಯಜ್ಞವಾಗಿದೆ'.

ಈ ಯಜ್ಞಗಳೆಲ್ಲಾ ಕೇವಲ ಕರ್ಮಗಳಿಂದ ಸಂಬಂಧ - ವಿಚ್ಛೇದ ಮಾಡುವುದಕ್ಕಾಗಿಯೇ ಇವೆ ಎಂದು ತಿಳಿದುಕೊಂಡು ಈ ಯಜ್ಞಗಳನ್ನು ಅನುಷ್ಠಾನ ಮಾಡುವ ಸಾಧಕನ ಪಾಪಗಳು ಪೂರ್ಣವಾಗಿ ನಾಶವಾಗಿಬಿಡುತ್ತವೆ. ॥೨೪-೩೦॥

**ಪಾಪಗಳ ನಾಶದ ನಂತರ ಏನಾಗುತ್ತದೆ, ಪರಮಾತ್ಮಾ?**

ಕುರುವಂಶೀಯರಲ್ಲಿ ಶ್ರೇಷ್ಠನಾದ ಎಲೈ ಅರ್ಜುನ ! ಆ ಯಜ್ಞಗಳನ್ನೂ ಮಾಡುವವರಿಗೆ ಅಮೃತಸ್ವರೂಪೀ ಪರಮಾತ್ಮನ ಸಾಕ್ಷಾತ್ಕಾರ ಉಂಟಾಗುತ್ತದೆ. ಆದರೆ ಯಜ್ಞವನ್ನೇ ಮಾಡದವರಿಗೆ ಈ ಮಾನವಲೋಕವೂ ಸಹ ಲಾಭದಾಯಕ ವಾಗುವುದಿಲ್ಲ; ಅಂದಮೇಲೆ ಪರಲೋಕ ಹೇಗೆ ತಾನೇ ಲಾಭದಾಯಕ ವಾಗಬಲ್ಲದು? ॥೩೧॥

**ಇಂತಹ ಯಜ್ಞಗಳ ವರ್ಣನೆ ಮತ್ತೆಲ್ಲಿದೆ?**

ಈ ಪ್ರಕಾರದ ಇನ್ನೂ ಅನೇಕ ರೀತಿಯ ಯಜ್ಞಗಳ ವಿಸ್ತಾರವಾದ ವರ್ಣನೆಗಳು ವೇದಗಳಲ್ಲಿವೆ. ಆ ಎಲ್ಲ ಯಜ್ಞಗಳು ನೀನು ಕರ್ಮಜನ್ಯವೆಂದು ತಿಳಿ. ಹೀಗೆ ತಿಳಿದುಕೊಂಡು ಯಜ್ಞ ಮಾಡುವುದರಿಂದ ನೀನು ಕರ್ಮಬಂಧನದಿಂದ ಮುಕ್ತನಾಗಿಹೋಗುವೆ. ॥೩೨॥

**ಯಜ್ಞಗಳಲ್ಲೆಲ್ಲಾ ಶ್ರೇಷ್ಠವಾದ ಯಜ್ಞವು ಯಾವುದು, ಭಗವಂತ?**

ಹೇ ಪರಂತಪ! ಆ ಎಲ್ಲಾ ಕರ್ಮಜನ್ಯ ಯಜ್ಞಗಳಿಗಿಂತ 'ಜ್ಞಾನಯಜ್ಞ'ವು ಶ್ರೇಷ್ಠವಾದದ್ದು. ಏಕೆಂದರೆ ಜ್ಞಾನಯಜ್ಞದಲ್ಲಿ ಸಂಪೂರ್ಣ ಕರ್ಮಗಳು ಮತ್ತು ಪದಾರ್ಥಗಳು ಸಮಾಪ್ತಿಯಾಗಿ ಹೋಗುತ್ತವೆ. ॥೩೩॥

**ಆ ಜ್ಞಾನವನ್ನು ಪಡೆಯುವುದು ಹೇಗೆ?**

ಆ ಜ್ಞಾನವನ್ನು ಪಡೆಯುವುದಕ್ಕಾಗಿ ನೀನು ತತ್ತ್ವದರ್ಶಿ ಜ್ಞಾನೀ ಮಹಾಪುರುಷರ ಬಳಿಗೆ ಹೋಗು, ಅವರ ಪಾದಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಅವರ ಸೇವೆ ಮಾಡು ಮತ್ತು ಗೌರವಾದರಪೂರ್ವಕ ಅವರಲ್ಲಿ ತತ್ತ್ವದ

* ಶ್ವಾಸವನ್ನು ಒಳಗಡೆಗೆ ತೆಗೆದುಕೊಳ್ಳುವುದು ಪೂರಕ, ಶ್ವಾಸವನ್ನು ಒಳಗಡೆ ತಡೆಯುವುದು ಕುಂಭಕ ಮತ್ತು ಶ್ವಾಸವನ್ನು ಹೊರಕ್ಕೆ ಬಿಡುವುದು ರೇಚಕ ಎಂದು ಹೇಳಲಾಗುತ್ತದೆ.

ಜಿಜ್ಞಾಸೆಯ ವಿಷಯದಲ್ಲಿ ಪ್ರಶ್ನೆ ಮಾಡು. ಆಗ ಆ ಜ್ಞಾನೀಮಹಾಪುರುಷರು ನಿನಗೆ ಜ್ಞಾನದ ಉಪದೇಶ ಮಾಡುವರು. ॥೩೪॥

**ಅವರು ಕೊಟ್ಟ ಜ್ಞಾನದಿಂದ ಏನಾಗುವುದು ?**

ಎಲೈ ಅರ್ಜುನ ! ಆ ಜ್ಞಾನವುಂಟಾದ ನಂತರ ನಿನಗೆ ಪುನಃ ಎಂದಿಗೂ ಮೋಹವುಂಟಾಗಲಾರದು ಹಾಗೂ ಆ ಜ್ಞಾನದಿಂದ ನೀನು ಸಂಪೂರ್ಣವಾಗಿ ಪ್ರಾಣಿಗಳನ್ನೆಲ್ಲಾ ಮೊದಲು ತನ್ನೊಳಗೂ ಮತ್ತು ನಂತರ ನನ್ನಲ್ಲಿಯೂ ಕಾಣುವೆ. ಅರ್ಥಾತ್ ಎಲ್ಲಾ ಸ್ಥಳಗಳಲ್ಲಿಯೂ ಪರಮಾತ್ಮ ತತ್ತ್ವವೊಂದನ್ನೇ ಅನುಭವ ಮಾಡಿಕೊಳ್ಳುವೆ. ॥೩೫॥

**ಈ ಜ್ಞಾನದ ಮಹಿಮೆ ಮತ್ತೇನಾದರೂ ಇದೆಯೇ ?**

ಹೌದು, ಒಂದು ವೇಳೆ ನೀನು ಎಲ್ಲಾ ಪಾಪಿಗಳಿಗಿಂತಲೂ ಸಹ ಅತ್ಯಂತ ಪಾಪಿಯೇ ಆದರೂ ಸಹ ನೀನು ಜ್ಞಾನರೂಪೀ ನೌಕೆಯ ಮೂಲಕ ನಿಸ್ಸಂದೇಹವಾಗಿ ಸಂಪೂರ್ಣ ಪಾಪಗಳಿಂದ ಚೆನ್ನಾಗಿ ಪಾರಾಗಿ ಹೋಗುವೆ. ॥೩೬॥

**ಹಡಗಿನ ಮೂಲಕ ಸಮುದ್ರವನ್ನು ದಾಟಿದ ಮೇಲೆ ಸಮುದ್ರವಾದರೂ ಇದ್ದೇ ಇರುತ್ತದೆ, ಅದರಂತೆಯೇ ಪಾಪಗಳಿಂದ ಪಾರಾದ ಮೇಲೆ ಪಾಪಗಳೂ ಇದ್ದೇ ಇರಬಹುದೇನೋ?**

ಇಲ್ಲವಪ್ಪಾ, ಅರ್ಜುನ ! ಪ್ರಜ್ವಲಿಸುವ ಅಗ್ನಿಯು ಕಟ್ಟಿಗೆಗಳನ್ನು ಪೂರ್ಣವಾಗಿ ಭಸ್ಮ ಮಾಡಿಬಿಡುತ್ತದೆ, ಅದರಂತೆಯೇ ಜ್ಞಾನರೂಪೀ ಅಗ್ನಿಯು ಸಂಪೂರ್ಣವಾಗಿ ಕರ್ಮಗಳೆಲ್ಲವನ್ನೂ (ಪಾಪಗಳನ್ನು) ಭಸ್ಮ ಮಾಡಿಬಿಡುತ್ತದೆ. ಆದುದರಿಂದ ಈ ಮಾನವ ಲೋಕದಲ್ಲಿ ಜ್ಞಾನಕ್ಕೆ ಸಮಾನವಾದ ಪವಿತ್ರ ವಸ್ತು ಯಾವುದೂ ಇಲ್ಲ. ಅದೇ ಜ್ಞಾನವನ್ನು ಕರ್ಮಯೋಗದ ಮೂಲಕ ಸಿದ್ಧಿ ಪಡೆದ ಮನುಷ್ಯನು ಖಂಡಿತವಾಗಿಯೂ ಸ್ವತಃ ತಾನೇ - ತನ್ನಲ್ಲಿ ಪಡೆದುಕೊಳ್ಳುತ್ತಾನೆ. ॥೩೭-೩೮॥

**ಕರ್ಮಯೋಗದಿಂದ ಸಿದ್ಧಿ ಪಡೆದ ಮನುಷ್ಯನಿಗೆ ತಾನೇ ತಾನಾಗಿ ದೊರೆಯುವ ಆ ಜ್ಞಾನವು ಬೇರೆ ಸಾಧಕನಿಗೆ ಯಾವ ಪ್ರಕಾರ ದೊರೆಯುತ್ತದೆ ?**

ಇಂದ್ರಿಯಗಳನ್ನು ವಶದಲ್ಲಿಟ್ಟುಕೊಳ್ಳುವ ಸಾಧನಪರಾಯಣ ಮತ್ತು ಶ್ರದ್ಧಾವಂತನಾದ ಸಾಧಕನಿಗೆ ಆ ಜ್ಞಾನವು ಲಭ್ಯವಾಗುತ್ತದೆ ಮತ್ತು ಜ್ಞಾನವನ್ನು ಪಡೆದು ಅವನು ಬಹು ಬೇಗನೇ ಪರಮ ಶಾಂತಿಯನ್ನು ಪಡೆದುಕೊಳ್ಳುತ್ತಾನೆ. ॥೩೯॥

**ಈ ಜ್ಞಾನವು ದೊರೆಯುವುದರಲ್ಲಿ ಅಡ್ಡಿಯಾವುದಿದೆ ?**

ಯಾರೂ ಸ್ವತಃ ತಿಳಿದುಕೊಳ್ಳುವುದಿಲ್ಲವೋ ಮತ್ತು ಇತರರಲ್ಲಿ ಶ್ರದ್ಧೆಯಿಡುವುದಿಲ್ಲವೋ, ಇತರರ ಮಾತನ್ನು ಒಪ್ಪುವುದಿಲ್ಲವೋ ಹಾಗೂ

ಯಾರೊಳಗೆ ಸಂಶಯ ಮನೆಮಾಡಿಕೊಂಡಿದೆಯೋ, ಅಂತಹ ಮನುಷ್ಯನ ಪತನವಾಗಿ ಹೋಗುತ್ತದೆ ಇಂತಹ ಸಂಶಯವುಳ್ಳ ಮನುಷ್ಯನಿಗೆ ಈ ಲೋಕವಾಗಲೀ ಪರಲೋಕವಾಗಲೀ ಯಾವುದೂ ಸುಖದಾಯಕವಾಗುವುದಿಲ್ಲ. ॥೪೦॥

**ಸಂಶಯ ನಾಶವಾದ ನಂತರ ಏನಾಗುತ್ತದೆ ?**

ಎಲೈ ಧನಂಜಯ ! ಯಾರು ಸಮಾನತೆಯ ಮೂಲಕ ಸಂಪೂರ್ಣವಾಗಿ ಕರ್ಮಗಳಿಂದ ಸಂಬಂಧ ವಿಚ್ಛೇದ ಮಾಡಿಕೊಂಡಿದ್ದಾನೆಯೋ ಮತ್ತು ಜ್ಞಾನ (ಕರ್ಮತತ್ತ್ವದಜ್ಞಾನ)ದ ಮೂಲಕ ಪೂರ್ಣವಾಗಿ ಸಂಶಯಗಳನ್ನೆಲ್ಲಾ ನಾಶ ಮಾಡಿದ್ದಾನೆಯೋ, ಅಂತಹ ಸ್ವರೂಪ - ಪರಾಯಣನಾದ ಮನುಷ್ಯನನ್ನು ಕರ್ಮಗಳು ಬಂಧಿಸುವುದಿಲ್ಲ. ಆದುದರಿಂದ ಎಲೈ ಭರತವಂಶೀ ಅರ್ಜುನ ! ನೀನು ಹೃದಯದಲ್ಲಿನೆಲೆಯಾಗಿರುವ ಅಜ್ಞಾನದಿಂದ ಉಂಟಾಗುವ ಸಂಶಯವನ್ನು ಜ್ಞಾನರೂಪೀ ಖಡ್ಗದಿಂದ ಭೇದಿಸಿ ಸಮತೆಯಲ್ಲಿ ಸ್ಥಿತನಾಗು ಮತ್ತು ಯುದ್ಧ ಮಾಡಲು (ಕರ್ತವ್ಯ-ಪಾಲನೆಗೆ) ಸಿದ್ಧನಾಗಿ ಎದ್ದು ನಿಲ್ಲು. ॥೪೧-೪೨॥



# ಐದನೇ ಅಧ್ಯಾಯವು

**ಹೇ ಕೃಷ್ಣ! ನೀನು ಒಮ್ಮೆ ಕರ್ಮಗಳ ತ್ಯಾಗವನ್ನು ಅರ್ಥಾತ್ ಸಾಂಖ್ಯಯೋಗದ ಪ್ರಶಂಸೆಮಾಡುವೆ ಮತ್ತೊಮ್ಮೆ ಕರ್ಮಯೋಗವನ್ನು. ಆದುದರಿಂದ ಈ ಎರಡು ಸಾಧನೆಗಳಲ್ಲಿ ಯಾವುದು ನಿಶ್ಚಿತವಾಗಿ ಮಂಗಳಪ್ರದವಾದುದೋ ಅದನ್ನು ನನಗೋಸ್ಕರ ತಿಳಿಸು ಎಂದು ಅರ್ಜುನ ಕೇಳಿದನು ॥೧॥**

ಶ್ರೀಕೃಷ್ಣ ಹೇಳಿದನು - ಸಾಂಖ್ಯಯೋಗ ಮತ್ತು ಕರ್ಮಯೋಗ - ಇವೆರಡೂ ಶ್ರೇಷ್ಠವಾಗಿವೆ. ಆದರೆ ಇವೆರಡರಲ್ಲಿಯೂ ಸಹ ಸಾಂಖ್ಯಯೋಗಕ್ಕಿಂತ ಕರ್ಮಯೋಗವೇ ಶ್ರೇಷ್ಠ. ॥೨॥

**ಹೇ ಕೃಷ್ಣ ! ಕರ್ಮಯೋಗ ಏಕೆ ಶ್ರೇಷ್ಠ?**

ಎಲೈ ಮಹಾಬಾಹು ! ಯಾರೊಡನೆಯೂ ಸಹ ರಾಗ-ದ್ವೇಷಾದಿಗಳಿಲ್ಲದ ಆ ಕರ್ಮಯೋಗಿಯು ಯಾವಾಗಲೂ ಸಂನ್ಯಾಸಿಯೆಂದೂ ತಿಳಿದುಕೊಳ್ಳಲು ಯೋಗ್ಯನು; ಏಕೆಂದರೆ ದ್ವಂದ್ವಗಳಿಂದ ರಹಿತನಾದುದರಿಂದ ಅವನು ಸುಖವಾಗಿ ಸಂಸಾರ ಬಂಧನದಿಂದ ಮುಕ್ತನಾಗಿ ಹೋಗುತ್ತಾನೆ. ॥೩॥

**ಎರಡೂ ಶ್ರೇಷ್ಠವೆಂದು ನೀನು ಹೇಳಿದೆ, ಹಾಗಾದರೆ ಎರಡರ ಫಲಪ್ರಾಪ್ತಿಯಲ್ಲಿ ಯಾವ ವ್ಯತ್ಯಾಸವೂ ಇಲ್ಲವೇ?**

ಸಾಂಖ್ಯಯೋಗ ಮತ್ತು ಕರ್ಮಯೋಗ ಇವು ಬೇರೆ - ಬೇರೆ ಫಲವುಳ್ಳವು ಎಂದು ತಿಳಿವಳಿಕೆಯಿಲ್ಲದವರು ಹೇಳುತ್ತಾರೆ, ಪಂಡಿತರಾದ (ಬುದ್ಧಿವಂತ) ಜನರಲ್ಲ; ಏಕೆಂದರೆ ಈ ಎರಡರಲ್ಲಿ ಯಾವುದಾದರೂ ಒಂದರಲ್ಲಿ ಸ್ಥಿತನಾದರೆ ಆ ಸಾಧಕನು ಎರಡರ ಫಲವನ್ನು ಪಡೆದುಕೊಳ್ಳುತ್ತಾನೆ ಅರ್ಥಾತ್ ಯಾವ ಫಲವು ಸಾಂಖ್ಯಯೋಗಿಗೆ ದೊರೆಯುವುದೋ ಅದೇ ಫಲ ಕರ್ಮಯೋಗಿಗೂ ದೊರೆಯುತ್ತದೆ. ಆದುದರಿಂದ ಸಾಂಖ್ಯಯೋಗ ಮತ್ತು ಕರ್ಮಯೋಗಗಳನ್ನು ಫಲದಲ್ಲಿ ಒಂದೇ ಎಂದು ಕಾಣುವವನು ಸರಿಯಾಗಿ ತಿಳಿದವನು. ॥೪-೫॥

**ಎರಡರ ಫಲವೂ ಒಂದೇ ರೀತಿಯಾಗಿರುವಾಗ, ಕರ್ಮಯೋಗವು ಶ್ರೇಷ್ಠವೇಕೆ?**

ಎಲೈ ಮಹಾಬಾಹು ! ಕರ್ಮಯೋಗದ ಹೊರತು ಅರ್ಥಾತ್ ಸಿದ್ಧಿ-ಅಸಿದ್ಧಿಗಳಲ್ಲಿ ಸಮನಾಗದೆ ಸಾಂಖ್ಯಯೋಗದ ಸಿದ್ಧಿ ಉಂಟಾಗುವುದು (ಸಮರೂಪೀ ಸ್ವರೂಪದಲ್ಲಿ ಸ್ಥಿತನಾಗುವುದು) ಕಠಿಣವಾಗಿದೆ. ಆದರೆ ಮನನಶೀಲ

ಕರ್ಮಯೋಗಿಯು ಸಿದ್ಧಿ-ಅಸಿದ್ಧಿಯಲ್ಲಿ ಸಮನಾಗಿ ಬಹುಬೇಗನೇ ಸಮರೂಪೀ ಬ್ರಹ್ಮನ ಪ್ರಾಪ್ತಿ ಮಾಡಿಕೊಳ್ಳುತ್ತಾನೆ. ॥೬॥

**ಅವನು ಕರ್ಮಯೋಗದಿಂದ ಬ್ರಹ್ಮನ ಪ್ರಾಪ್ತಿಯನ್ನು ಹೇಗೆ ಪಡೆದುಕೊಳ್ಳುತ್ತಾನೆ?**

ಇಂದ್ರಿಯಗಳನ್ನು ಜಯಿಸುವವನು, ನಿರ್ಮಲ ಅಂತಃಕರಣವುಳ್ಳವನು, ಶರೀರವನ್ನು ವಶದಲ್ಲಿಟ್ಟುಕೊಳ್ಳುವವನು ಹಾಗೂ ಎಲ್ಲಾ ಪ್ರಾಣಿಗಳಲ್ಲಿಯೂ ತನ್ನನ್ನೇ ಕಂಡುಕೊಳ್ಳುವ ಕರ್ಮಯೋಗಿಯು ಕರ್ಮ ಮಾಡುತ್ತಾ ಇದ್ದರೂ ಸಹ ಕರ್ಮಗಳಿಂದ ಲಿಪ್ತನಾಗುವುದಿಲ್ಲ ಅರ್ಥಾತ್ ಪರಮಾತ್ಮನನ್ನು ಪಡೆಯುತ್ತಾನೆ. ॥೭॥

**ಸಾಂಖ್ಯಯೋಗಿಯು ಕರ್ಮಗಳಿಂದ ಹೇಗೆ ನಿರ್ಲಿಪ್ತನಾಗಿರುತ್ತಾನೆ?**

ಸತ್-ಅಸತ್ತಿನ ತತ್ತ್ವವನ್ನು ತಿಳಿದುಕೊಂಡು ಸತ್‌ನಲ್ಲಿ ನಿರತನಾಗಿರುವ ಸಾಂಖ್ಯಯೋಗಿಯು ನೋಡುವಾಗ, ಕೇಳುವಾಗ, ಮುಟ್ಟುವಾಗ, ಮೂಸುವಾಗ, ತಿನ್ನುವಾಗ, ಓಡಾಡುವಾಗ, ನಿದ್ರಿಸುವಾಗ, ಉಸಿರಾಡುವಾಗ, ಮಾತನಾಡುವಾಗ, ಮಲ-ಮೂತ್ರ ವಿಸರ್ಜಿಸುವಾಗ, ಗ್ರಹಿಸುವಾಗ, ಕಣ್ಣು ತೆರೆಯುವಾಗ ಮುಚ್ಚುವಾಗಲೂ ಸಹ 'ಇಂದ್ರಿಯಗಳೇ ತಮ್ಮ ತಮ್ಮ ವಿಷಯಗಳಲ್ಲಿ ವರ್ತಿಸುತ್ತಾ ಇವೆ- ಎಂಬುದಾಗಿ ತಿಳಿಯುತ್ತಾನೆ ಮತ್ತು ನಾನು (ಸ್ವತಃ) ಏನನ್ನೂ ಸಹ ಮಾಡುತ್ತಾ ಇಲ್ಲ' - ಎಂಬ ಅನುಭವ ಪಡೆದು ಕರ್ಮಗಳಿಂದ ನಿರ್ಲಿಪ್ತ ನಾಗಿರುತ್ತಾನೆ. ॥೮-೯॥

**ಕರ್ಮಯೋಗಿ ಮತ್ತು ಸಾಂಖ್ಯಯೋಗಿ - ಇಬ್ಬರೂ ಕರ್ಮಗಳಿಂದ ನಿರ್ಲಿಪ್ತರಾಗಿರುತ್ತಾರೆ. ಹೀಗೆ ನಿರ್ಲಿಪ್ತರಾಗಿರಲು ಬೇರೆ ಯಾವುದಾದರೂ ಉಪಾಯವಿದೆಯೇ ?**

ಹೌದು, ಭಕ್ತಿಯೋಗವಿದೆ. ಭಕ್ತಿಯೋಗಿಯು ಆಸಕ್ತಿಯನ್ನು ತ್ಯಜಿಸಿ ಹಾಗೂ ಕರ್ಮಗಳನ್ನೆಲ್ಲಾ ಭಗವಂತನಿಗೆ ಸಮರ್ಪಿಸಿ ಕರ್ಮಮಾಡುತ್ತಾನೆ. ಆದುದರಿಂದ ಆತನೂ ಸಹ ನೀರಿನಲ್ಲಿರುವ ತಾವರೇ ಎಲೆಯಂತೆ ಪಾಪಗಳಿಂದ, ಕರ್ಮಗಳಿಂದ ಲಿಪ್ತನಾಗುವುದಿಲ್ಲ. ॥೧೦॥

**ಶ್ರೀಕೃಷ್ಣಾ! ಭಕ್ತಿಯೋಗಿಯಾದರೋ ನಿನಗೆ ಸಮರ್ಪಿಸುವ ಉದ್ದೇಶದಿಂದ ಕರ್ಮಮಾಡುತ್ತಾನೆ. ಆದುದರಿಂದ ಆತನು ಲಿಪ್ತನಾಗುವುದಿಲ್ಲ ; ಆದರೆ ಕರ್ಮಯೋಗಿ ಯಾವ ಉದ್ದೇಶದಿಂದ ಕರ್ಮಮಾಡುತ್ತಾ ಲಿಪ್ತನಾಗುವುದಿಲ್ಲ?**

ಕರ್ಮಯೋಗಿಯು ಇಂದ್ರಿಯಗಳಲ್ಲಿ, ಶರೀರ, ಮನಸ್ಸು ಬುದ್ಧಿ ಇತ್ಯಾದಿಗಳಲ್ಲಿ

ಮಮತೆಯನ್ನಿಡದೆ ಮತ್ತು ಫಲಾಸಕ್ತಿಯನ್ನು ತ್ಯಜಿಸಿ ಕೇವಲ ಅಂತಃಕರಣದ ಶುದ್ಧಿಗಾಗಿಯೇ ಕರ್ಮಮಾಡುತ್ತಾನೆ. ಆದ್ದರಿಂದ ಕರ್ಮಯೋಗಿಯು ಕರ್ಮಫಲದ ಇಚ್ಛೆಯನ್ನು ತ್ಯಜಿಸಿ ಚಿರಸ್ಥಾಯಿಯಾಗಿರುವ ಪರಮಶಾಂತಿಯನ್ನು ಪಡೆಯುತ್ತಾನೆ. ಆದರೆ ಯೋಗಿಯಲ್ಲದವನು ಆಸೆ - ಆಕಾಂಕ್ಷೆಗಳ ಕಾರಣದಿಂದ ಕರ್ಮಫಲದಲ್ಲಿ ಆಸಕ್ತನಾಗಿ ಬಂಧಿತನಾಗುತ್ತಾನೆ. ॥೧೧-೧೨॥

**ಪರಮಾತ್ಮಾ ! ಸಾಂಖ್ಯಯೋಗಿಯಿಂದ ಕರ್ಮಗಳು ಯಾವ ಪ್ರಕಾರ ನಡೆಯುತ್ತವೆ ?**

ಶರೀರ, ಇಂದ್ರಿಯಗಳು ಮತ್ತು ಮನಸ್ಸನ್ನು ವಶದಲ್ಲಿಟ್ಟುಕೊಂಡಿರುವ ಸಾಂಖ್ಯಯೋಗಿಯು ಮನಸ್ಸಿನಿಂದ ಸಂಪೂರ್ಣವಾಗಿ ಕರ್ಮಗಳನ್ನು ಒಂಭತ್ತು ದ್ವಾರಗಳುಳ್ಳ ಶರೀರದಲ್ಲಿಯೇ ಬಿಟ್ಟು, ಮಾಡದೆಯೂ ಮತ್ತು ಮಾಡಿಸದೆಯೂ ಸುಖವಾಗಿ ತನ್ನ ಸ್ವರೂಪದಲ್ಲಿ ಸ್ಥಿರಗೊಂಡಿರುತ್ತಾನೆ. ॥೧೩॥

**ಸಾಂಖ್ಯಯೋಗಿಯಾದರೋ ಕರ್ಮಮಾಡುವುದೂ ಇಲ್ಲ ಮತ್ತು ಮಾಡಿಸುವುದೂ ಇಲ್ಲ, ಆದರೆ ಪರಮಾತ್ಮನಾದರೋ ಮಾಡಿಸಬಹುದು ?**

ಪರಮಾತ್ಮನು ಯಾವ ಮನುಷ್ಯನ ಕರ್ತೃತ್ವವನ್ನು ರಚಿಸುವುದಿಲ್ಲ, ಯಾರಿಂದಲೂ ಕರ್ಮಮಾಡಿಸುವುದೂ ಇಲ್ಲ ಮತ್ತು ಕರ್ಮ ಫಲದೊಡನೆ ಯಾರ ಸಂಬಂಧವನ್ನು ಕೂಡಾ ಸೇರಿಸುವುದಿಲ್ಲ. ಆದರೆ ಮನುಷ್ಯರು ತಮ್ಮ-ತಮ್ಮ ಸ್ವಭಾವ (ಅಭ್ಯಾಸ)ಕ್ಕೆ ಅನುಸಾರವಾಗಿಯೇ ಕರ್ಮಮಾಡುತ್ತಾರೆ ಮತ್ತು ತಮ್ಮನ್ನು ಆ ಕರ್ಮಗಳ ಕರ್ತೃವೆಂದು ಭಾವಿಸಿಕೊಳ್ಳುತ್ತಾರೆ. ಮತ್ತೆ ಕರ್ಮಫಲದೊಡನೆ ಸಂಬಂಧ ತಾನೇ ತಾನಾಗಿ ಏರ್ಪಡುತ್ತದೆ. ॥೧೪॥

**ಆ ಪರಮಾತ್ಮನು ಯಾರ ಕರ್ತೃತ್ವಾದಿಗಳ ರಚನೆಯನ್ನು ಮಾಡುವುದಿಲ್ಲ. ಆದರೆ ಪ್ರಾಣಿಗಳ ಕರ್ಮಫಲವನ್ನಾದರೂ ತೆಗೆದುಕೊಳ್ಳಬಹುದು?**

ಸರ್ವವ್ಯಾಪಿ ಪರಮಾತ್ಮನು ಯಾರ ಪಾಪ ಮತ್ತು ಪುಣ್ಯಕರ್ಮವನ್ನೂ ತೆಗೆದುಕೊಳ್ಳುವುದಿಲ್ಲ; ಆದರೆ ಅಜ್ಞಾನದ ಮೂಲಕ ಸ್ವರೂಪದ ಜ್ಞಾನ ಮುಚ್ಚಲ್ಪಟ್ಟಿರುವುದರಿಂದ ಆ ಜೀವರು ಮೋಹಕ್ಕೊಳಗಾಗುತ್ತಾರೆ, ಅರ್ಥಾತ್ ತಮ್ಮನ್ನು ಕರ್ಮಗಳ ಕರ್ತೃ ಮತ್ತು ಅನುಭವಿಸುವವನು ಎಂದು ತಿಳಿದುಕೊಳ್ಳುತ್ತಾರೆ. ಅದರಿಂದ ಅವರು ಹುಟ್ಟುತ್ತಾ - ಸಾಯುತ್ತಾ ಇರುತ್ತಾರೆ. ॥೧೫॥

**ಹಾಗಾದರೆ ಎಲ್ಲಾ ಜೀವರೂ ಇದೇ ರೀತಿ ತಮ್ಮನ್ನು ಕರ್ತಾ-ಭೋಕ್ತಾ ಎಂದು ತಿಳಿದುಕೊಂಡು ಮೋಹಿತರಾಗಿರುತ್ತಾರೆಯೇ?**

ಇಲ್ಲಾ, ಯಾರು ಜ್ಞಾನ (ವಿವೇಕದ)ದ ಮೂಲಕ ತಮ್ಮ ಅಜ್ಞಾನವನ್ನು

ನಾಶಮಾಡಿದ್ದಾರೆಯೋ, ಅವರ ಆ ಸೂರ್ಯನಂತಹ ಜ್ಞಾನವು ಅವರನ್ನು ಕರ್ತೃತ್ವ ಭೋಕ್ತೃತ್ವ ರಹಿತರನ್ನಾಗಿ ಮಾಡಿ ಪರಮಾತ್ಮನನ್ನು ಪ್ರಕಾಶಪಡಿಸುತ್ತದೆ ಅರ್ಥಾತ್ ಅವರಿಗೆ ಪರಮಾತ್ಮನ ಅನುಭವ ಮಾಡಿಸಿಕೊಡುತ್ತದೆ. ॥೧೬॥

**ಆ ಪರಮಾತ್ಮ ತತ್ತ್ವದ ಅನುಭವ ಮತ್ತೆ ಯಾರಿಗಾಗುತ್ತದೆ ?**

ಯಾರ ಬುದ್ಧಿ ಮತ್ತು ಮನಸ್ಸು ತದಾಕಾರವಾಗಿದೆಯೋ, ಯಾರ ಸ್ಥಿತಿ ಪರಮಾತ್ಮ ತತ್ತ್ವದಲ್ಲಿರುತ್ತದೆಯೋ, ಅಂತಹ ಪರಮಾತ್ಮ ಪರಾಯಣರಾದ ಸಾಧಕರು ಜ್ಞಾನದ ಮೂಲಕ ಪಾಪ-ಪುಣ್ಯರಹಿತರಾಗಿ ಪರಮಾತ್ಮನನ್ನು ಪಡೆದುಕೊಳ್ಳುತ್ತಾರೆ. ಅವರಿಗೆ ಮತ್ತೆ ಪುನರ್ಜನ್ಮ ಉಂಟಾಗುವುದಿಲ್ಲ. ॥೧೭॥

**ಪರಮಾತ್ಮನ ಪ್ರಾಪ್ತಿಯಾದ ಮೇಲೆ ದೊರೆತ ಆ ಮಹಾಪುರುಷರ ಜ್ಞಾನವು ವ್ಯವಹಾರ ಕಾಲದಲ್ಲಿ ಯಾವ ರೀತಿಯಾಗಿರುತ್ತದೆ ?**

ಆ ತತ್ತ್ವಜ್ಞರಾದ ಮಹಾಪುರುಷರು ವಿದ್ಯಾ - ವಿನಯ ಸಂಪನ್ನರಾದ ಬ್ರಾಹ್ಮಣನಲ್ಲಿ ಮತ್ತು ಚಾಂಡಾಲನಲ್ಲಿ ಹಾಗೂ ಆಕಳು, ಆನೆ ಮತ್ತು ನಾಯಿಯಲ್ಲಿ ಸಹ ಒಂದೇ ಸಮರೂಪಿಯಾದ ಪರಮಾತ್ಮನನ್ನೇ ಕಾಣುತ್ತಾರೆ, ಆದರೆ ಊಟ ತಿಂಡಿಗಳಾದಿ ವ್ಯವಹಾರದಲ್ಲಿ ಅವುಗಳೊಡನೆ ಏಕತೆಮಾಡುವುದಿಲ್ಲ ॥೧೮॥

**ಸಮದರ್ಶಿಯಾಗುವುದರಿಂದ ಏನಾಗುತ್ತದೆ?**

ಯಾರ ಮನಸ್ಸು ಪೂರ್ಣವಾಗಿ ಸಾಮ್ಯಾವಸ್ಥೆಯಲ್ಲಿ ಅರ್ಥಾತ್ ಪರಮಾತ್ಮ ತತ್ತ್ವದಲ್ಲಿ ಸ್ಥಿರವಾಗಿದೆಯೋ, ಅವರು ಇಲ್ಲಿಯೇ (ಈ ಜೀವಿತಾವಧಿಯಲ್ಲಿ) ಜಗತ್ತನ್ನು ಜಯಿಸಿರುತ್ತಾರೆ ಅರ್ಥಾತ್ ಅವರು ಜಗತ್ತಿನಿಂದ ಅತೀತರಾಗುತ್ತಾರೆ. ಏಕೆಂದರೆ ಬ್ರಹ್ಮ ನಿರ್ದೋಷ ಮತ್ತು ಸಮವಾಗಿದೆ. ಆದುದರಿಂದ ಅವರು ಸಮರೂಪೀ ಬ್ರಹ್ಮನಲ್ಲಿಯೇ ಸ್ಥಿರವಾಗಿರುತ್ತಾರೆ. ॥೧೯॥

**ಅಂತಹ ಸಾಮ್ಯಾವಸ್ಥೆಯಲ್ಲಿ ಸ್ಥಿತವಾಗಿರಲು ಉಪಾಯವೇನು ?**

ವ್ಯವಹಾರದಲ್ಲಿ ಪ್ರಿಯ-ಅಪ್ರಿಯ ಅರ್ಥಾತ್ ಅನುಕೂಲ ಪ್ರತಿಕೂಲ ಪರಿಸ್ಥಿತಿ ಉಂಟಾದರೂ ಸಹ ಯಾರು ಸಂತೋಷ ಮತ್ತು ದುಃಖ ಪಡುವುದಿಲ್ಲವೋ, ಆ ಮೋಹ ರಹಿತ, ಸ್ಥಿರ ಬುದ್ಧಿಯುಳ್ಳ ಮತ್ತು ಬ್ರಹ್ಮವನ್ನು ತಿಳಿದ ಮನುಷ್ಯನು ಪರಮಾತ್ಮನಲ್ಲಿಯೇ ಸ್ಥಿತನಾಗಿರುತ್ತಾನೆ. ॥೨೦॥

**ಶ್ರೀಕೃಷ್ಣ ! ಈ ಸ್ಥಿತಿಯು ಯಾವ ಕ್ರಮದಿಂದ ದೊರೆಯುತ್ತದೆ ?**

ಬಾಹ್ಯ ಪದಾರ್ಥಗಳಲ್ಲಿ ಆಸಕ್ತಿಯಿಲ್ಲದವನು ಮೊದಲು ತಾನೇ-ತನ್ನಲ್ಲಿರುವ

ಸಾತ್ತ್ವಿಕ ಸುಖವನ್ನು ಪಡೆದುಕೊಳ್ಳುತ್ತಾನೆ. ನಂತರ ಅವನು ಪರಮಾತ್ಮನಲ್ಲಿ ಐಕ್ಯತೆಯನ್ನು ಪಡೆದು ಅಕ್ಷಯ ಸುಖದ ಅನುಭವ ಹೊಂದುತ್ತಾನೆ. ॥೨೧॥

**ಬಾಹ್ಯ ಪದಾರ್ಥಗಳ ಆಸಕ್ತಿಯಿಂದ ಪಾರಾಗುವುದು ಹೇಗೆ?**

ಹೇ ಕುಂತೀನಂದನ! ಇಂದ್ರಿಯಗಳ ಮತ್ತು ವಿಷಯಗಳ ಸಂಯೋಗದಿಂದ ಉಂಟಾಗುವಂತಹ ಎಷ್ಟು ಭೋಗಗಳಿವೆಯೋ, ಅವುಗಳೆಲ್ಲವೂ ದುಃಖಗಳಿಗೇ ಕಾರಣವಾಗಿವೆ ಮತ್ತು ಆದಿ-ಅಂತ್ಯಗಳುಳ್ಳವು (ಬಂದು-ಹೋಗುವವು)ಗಳಾಗಿವೆ. ಆದುದರಿಂದ ವಿವೇಕಿಗಳಾದ ಮನುಷ್ಯರು ಅವುಗಳಲ್ಲಿ ರಮಿಸುವುದಿಲ್ಲ. ॥೨೨॥

**ಆ ಸುಖ-ಭೋಗಗಳಲ್ಲಿ ರಮಿಸದೇ ಇರುವ ಮನುಷ್ಯರ ವಿಶೇಷತೆಯೇನು?**

ಯಾವ ಮನುಷ್ಯನು ಶರೀರ ಬಿಡುವುದಕ್ಕಿಂತ ಮೊದಲೇ (ಜೀವಿಸಿರುವಾಗ) ಕಾಮ-ಕ್ರೋಧಗಳ ವೇಗವನ್ನು ಸಹಿಸುವುದಕ್ಕೆ ಸಮರ್ಥನಾಗುತ್ತಾನೋ ಅರ್ಥಾತ್ ಕಾಮ-ಕ್ರೋಧಗಳ ವೇಗ ಉತ್ಪತ್ತಿಯಾಗದಂತೆ ಮಾಡಿಕೊಳ್ಳುತ್ತಾನೆಯೋ, ಅವನೇ ಸುಖೀ, ಅವನೇ ಯೋಗಿ ಮತ್ತು ಆತನೇ ನರ ಅರ್ಥಾತ್ ಧೀರನಾಗಿದ್ದಾನೆ. ॥೨೩॥

**ಆ ರೀತಿಯಾದರೆ ಏನಾಗುತ್ತದೆ?**

ಕಾಮ-ಕ್ರೋಧದ ವೇಗ ಉಂಟಾಗದೇ ಇರುವುದರಿಂದ ಅವನಿಗೆ ಪರಮಾತ್ಮ ತತ್ತ್ವದ ಸುಖ ದೊರೆಯುತ್ತದೆ, ಅವನು ಪರಮಾತ್ಮ ತತ್ತ್ವದಲ್ಲಿಯೇ ರಮಿಸುತ್ತಾನೆ ಮತ್ತು ಆತನ ಜ್ಞಾನ ಯಾವಾಗಲೂ ಪ್ರತ್ಯಕ್ಷವಾಗಿರುತ್ತದೆ. ಹೀಗೆ ಬ್ರಹ್ಮ ಸ್ವರೂಪಿಯಾದ ಆ ಸಾಧಕನು ಶಾಂತ ಬ್ರಹ್ಮವನ್ನು ಪಡೆದುಕೊಳ್ಳುತ್ತಾನೆ ॥೨೪॥

**ಆ ಶಾಂತ ಬ್ರಹ್ಮವನ್ನು ಮತ್ತೆ ಯಾರು ಪಡೆಯುತ್ತಾರೆ?**

ಯಾರ ಶರೀರ ಇಂದ್ರಿಯಗಳು - ಮನಸ್ಸು - ಬುದ್ಧಿ ವಶದಲ್ಲಿವೆಯೋ, ಯಾರು ಸಕಲ ಪ್ರಾಣಿಗಳ ಹಿತದಲ್ಲಿ ನಿರತರಾಗಿದ್ದಾರೆಯೋ, ಯಾರ ಮನಸ್ಸಿನ ಎಲ್ಲಾ ದ್ವಂದ್ವಗಳೂ (ಸಂಶಯ) ನಾಶವಾಗಿವೆಯೋ ಮತ್ತು ಯಾರ ಪಾಪಗಳೆಲ್ಲಾ ಕಳೆದು ಹೋಗಿವೆಯೋ, ಅಂತಹ ವಿವೇಕೀ ಸಾಧಕರು ನಿರ್ವಾಣ ಬ್ರಹ್ಮವನ್ನು ಪಡೆಯುತ್ತಾರೆ. ॥೨೫॥

**ನಿರ್ವಾಣ ಬ್ರಹ್ಮವನ್ನು ಪಡೆದವರ ಲಕ್ಷಣಗಳೇನು?**

ಅವರು ಸಂಪೂರ್ಣವಾಗಿ ಕಾಮ-ಕ್ರೋಧಗಳಿಲ್ಲದವರಾಗಿರುತ್ತಾರೆ, ಅವರ ಮನಸ್ಸು ವಶದಲ್ಲಿರುತ್ತದೆ, ಅವರು ಸ್ವರೂಪದ ಸಾಕ್ಷಾತ್ಕಾರ ಮಾಡಿ ಕೊಂಡವರಾಗಿರುತ್ತಾರೆ; ಅಂತಹ ಸಾಂಖ್ಯಯೋಗಿಗಳಿಗೆ ಜೀವಿತಕಾಲದಲ್ಲಿ ಮತ್ತು ಮರಣದ ನಂತರ ನಿರ್ವಾಣ ಬ್ರಹ್ಮವೇ ಪ್ರಾಪ್ತಿಯಾಗುತ್ತದೆ. ॥೨೬॥

**ಈ ನಿರ್ವಾಣ ಬ್ರಹ್ಮವನ್ನು ಯಾವುದಾದರೂ ಬೇರೆ ಸಾಧನದಿಂದಲೂ ಸಹ ಪಡೆದುಕೊಳ್ಳಬಹುದೇನು?**

ಹೌದು, ಧ್ಯಾನಯೋಗದಿಂದ ಪಡೆದುಕೊಳ್ಳಲಾಗುತ್ತದೆ. ಬಾಹ್ಯ ವಿಷಯ ಗಳನ್ನು ಹೊರಗಡೆಯೇ ಬಿಟ್ಟು ಅರ್ಥಾತ್ ಸಂಪೂರ್ಣ ವಿಷಯಗಳನ್ನು ತ್ಯಾಗ ಮಾಡಿ, ಕಣ್ಣಿನ ದೃಷ್ಟಿಯನ್ನು ಹುಬ್ಬುಗಳ ಮಧ್ಯೆ ಸ್ಥಿರಗೊಳಿಸಿ ಮತ್ತು ಮೂಗಿನಲ್ಲಿ ಸಂಚರಿಸುವ ಪ್ರಾಣ - ಅಪಾನ ವಾಯುವನ್ನು ಅರ್ಥಾತ್ ಪೂರಕ ರೇಚಕಗಳನ್ನು (ಉಚ್ಛ್ವಾಸ - ನಿಃಶ್ವಾಸ) ಸಮಾನಗೊಳಿಸಿ, ಯಾರ ಇಂದ್ರಿಯಗಳು, ಮನಸ್ಸು ಮತ್ತು ಬುದ್ಧಿ ತಮ್ಮ ವಶದಲ್ಲಿವೆಯೋ, ಅಂತಹ ಇಚ್ಛೆ, ಭಯ ಮತ್ತು ಕ್ರೋಧಗಳಿಲ್ಲದ ಮೋಕ್ಷಪರಾಯಣರಾದ ಆ ಸಾಧಕರು ಸದಾ ಮುಕ್ತರೇ ಆಗಿರುತ್ತಾರೆ. ॥೨೭-೨೮॥

**ಎಲ್ಲರೂ ಸುಗಮವಾಗಿ ಮುಕ್ತರಾಗಿ ಹೋಗುವಂತಹ, ಬೇರೆ ಯಾವುದಾದರೂ ಸುಗಮ ಸಾಧನವುಂಟೇ?**

ಹೌದು ಭಕ್ತಿಯೋಗವಿದೆ. ನನ್ನನ್ನು ಇಡೀ ಜಗತ್ತಿನ ಮಹಾನ್ ಒಡೆಯ, ಸಕಲ ಪ್ರಾಣಿಗಳ ಪರಮ ಸಹೃದಯಿ (ಸ್ವಾರ್ಥರಹಿತ ದಯಾಳೂ ಮತ್ತು ಪ್ರೇಮಿ) ಹಾಗೂ ಎಲ್ಲಾ ಯಜ್ಞಗಳ ಮತ್ತು ತಪಸ್ಸುಗಳ ಭೋಕ್ತಾ ಎಂದು ತಿಳಿದುಕೊಳ್ಳುವವನಿಗೆ ದೃಢತೆಯಿಂದ ತಿಳಿದವನಿಗೆ ಅರ್ಥಾತ್ ತನ್ನನ್ನು ಎಂದಿಗೂ ಭೋಕ್ತಾ ಎಂದು ತಿಳಿಯದವನಿಗೆ ಪರಮ ಶಾಂತಿ ದೊರೆಯುತ್ತದೆ. ॥೨೯॥



# ಆರನೇ ಅಧ್ಯಾಯವು

ಭಗವಂತನು ಹೇಳಿದನು - ನಾನು ಕರ್ಮಯೋಗದ ಬಹಳಷ್ಟು ವಿಚಾರಗಳನ್ನು ತಿಳಿಸಿದೆ, ಈಗ ಕರ್ಮಯೋಗದ ಸಾರಾಂಶವನ್ನು ತಿಳಿಸುತ್ತೇನೆ. ಯಾವ ಮನುಷ್ಯ ಕರ್ಮಫಲದ ಅರ್ಥಾತ್ ಉತ್ಪತ್ತಿ - ವಿನಾಶಶೀಲವಾದ ಪದಾರ್ಥಗಳ ಆಶ್ರಯವನ್ನು ಪಡೆಯದೆ ಕರ್ತವ್ಯಕರ್ಮ ಮಾಡುತ್ತಾನೆಯೋ, ಅವನೇ ಸಂನ್ಯಾಸಿ ಮತ್ತು ಆತನೇ ಯೋಗಿಯಾಗಿದ್ದಾನೆ. ಕೇವಲ ಅಗ್ನಿ ಮತ್ತು ಕ್ರಿಯೆಯನ್ನು ತ್ಯಜಿಸುವವನು ಸಂನ್ಯಾಸಿ ಮತ್ತು ಯೋಗಿ ಅಲ್ಲ. ಆದುದರಿಂದ ಎಲೈ ಅರ್ಜುನ! ಜನರು ಯಾವುದನ್ನು ಸಂನ್ಯಾಸ (ಸಾಂಖ್ಯಯೋಗ) ಎಂದು ಹೇಳುತ್ತಾರೆಯೋ, ಅದನ್ನೇ ನೀನು ಯೋಗ (ಕರ್ಮಯೋಗ) ಎಂದು ತಿಳಿ ॥೧॥

**ಸಂನ್ಯಾಸಿ ಮತ್ತು ಯೋಗಿಯಲ್ಲಿ ಮಹಿಮೆ ಯಾವ ವಿಚಾರದಲ್ಲಿದೆ?**

ಸಂಕಲ್ಪಗಳ ತ್ಯಾಗದ ವಿಚಾರವಾಗಿ; ಏಕೆಂದರೆ ಸಂಕಲ್ಪಗಳನ್ನು ತ್ಯಾಗಮಾಡದ ಹೊರತು ಅರ್ಥಾತ್ ತನ್ನ ಮನಸ್ಸಿನ ವಿಚಾರವನ್ನು ಬಿಡದ ಹೊರತು ಮನುಷ್ಯ ಎಂತಹ ಯೋಗಿಯೂ ಸಹ ಆಗಲಾರನು. ॥೨॥

**ಯೋಗಿಯಾಗಲು ಮುಖ್ಯ ಕಾರಣವೇನು?**

ಯೋಗ (ಸಮತ್ವ)ದಲ್ಲಿ ಆರೂಢನಾಗಲು ಬಯಸುವಂತಹ ಮನನಶೀಲ ಯೋಗಿಯು ನಿಷ್ಕಾಮ ಭಾವದಿಂದ ಕರ್ತವ್ಯಕರ್ಮ ಮಾಡುವುದು (ಯೋಗಾರೂಢನಾಗಲು) ಕಾರಣವಾಗಿದೆ ಮತ್ತು ಅದೇ ಯೋಗಾರೂಢ ಮನುಷ್ಯನ ಶಾಂತಿಯು ಪರಮಾತ್ಮ ತತ್ತ್ವದ ಪ್ರಾಪ್ತಿಗೆ ಕಾರಣವಾಗಿದೆ, ಅರ್ಥಾತ್ ಸಂಸಾರದ ತ್ಯಾಗದಿಂದ ದೊರೆಯುವ ಶಾಂತಿಯನ್ನು ಅನುಭವಿಸದಿರುವುದೇ ಪರಮಾತ್ಮ ತತ್ತ್ವದ ಪ್ರಾಪ್ತಿಯಲ್ಲಿ ಕಾರಣವಾಗಿದೆ. ॥೩॥

**ಆ ಯೋಗಾರೂಢನಾದ ಮನುಷ್ಯನ ಲಕ್ಷಣಗಳೇನು?**

ಯಾರಿಗೆ ಇಂದ್ರಿಯಗಳ ಭೋಗಗಳಲ್ಲಿ ಮತ್ತು ಕರ್ಮಗಳಲ್ಲಿ ಆಸಕ್ತಿಯಿಲ್ಲವೋ ಹಾಗೂ ತನ್ನ ಯಾವುದೇ ಸಂಕಲ್ಪಗಳೂ ಇಲ್ಲವೋ ಆ ಮನುಷ್ಯನು ಯೋಗಾರೂಢನಾಗಿದ್ದಾನೆ. ॥೪॥

**ಮನುಷ್ಯನು ಯೋಗಾರೂಢನಾಗಲು ಏನು ಮಾಡಬೇಕು ?**

ಸ್ವತಃ ತನ್ನನ್ನು ತಾನೇ ಉದ್ಧಾರ ಮಾಡಿಕೊಳ್ಳಬೇಕು. ತನ್ನ ಪತನ ಮಾಡಿಕೊಳ್ಳಬಾರದು. ಏಕೆಂದರೆ ತಾನೇ-ತನ್ನ ಮಿತ್ರ ಮತ್ತು ತಾನೇ-ತನ್ನ ಶತ್ರುವಾಗಿದ್ದಾನೆ. ॥೫॥

**ತಾನು ತನ್ನ ಮಿತ್ರ ಮತ್ತು ತನ್ನ ಶತ್ರು ಹೇಗೆ?**

ಯಾರು ತಾನು ತನ್ನಿಂದ ತನ್ನ ಮೇಲೆ ವಿಜಯಿಯಾಗಿದ್ದಾನೆಯೋ ಅರ್ಥಾತ್ ಯಾರು ಅಸತ್‌ನೊಡನೆ ತನ್ನ ಸಂಬಂಧವನ್ನು ತಿಳಿಯುವುದಿಲ್ಲವೋ, ಅವನು ತಾನೇ ತನ್ನ ಮಿತ್ರ ಮತ್ತು ಯಾರು ತನ್ನನ್ನು ಜಯಿಸಿಕೊಂಡಿರುವುದಿಲ್ಲವೋ ಅರ್ಥಾತ್ ಯಾರು ಅಸತ್‌ನೊಡನೆ ತನ್ನ ಸಂಬಂಧವನ್ನು ತಿಳಿಯುತ್ತಾನೆಯೋ ಅವನು ತಾನೇ ತನ್ನ ಶತ್ರುವಾಗಿದ್ದಾನೆ. ॥೬॥

**ತಾನೇ ತನ್ನ ಮಿತ್ರನಾಗುವುದರಿಂದ ಏನಾಗುವುದು ?**

ತನ್ನನ್ನು ತಾನೇ ಜಯಿಸಿಕೊಂಡಿರುವವನು ಪ್ರಾರಬ್ಧದಂತೆ ಒದಗಿಬರುವ ಅನುಕೂಲ-ಪ್ರತಿಕೂಲಗಳಲ್ಲಿ, ವರ್ತಮಾನದಲ್ಲಿ ಮಾಡಲಾಗುವ ಕರ್ಮಗಳ ಸಫಲತೆ-ವಿಫಲತೆಗಳಲ್ಲಿ ಹಾಗೂ ಇತರರಿಂದ ಮಾಡಲಾಗುವ ಮಾನ-ಅಪಮಾನಗಳಲ್ಲಿ ನಿರ್ವಿಕಾರನಾಗಿರುತ್ತಾನೆ. ಆದುದರಿಂದ ಅವನಿಗೆ ಪರಮಾತ್ಮನ ಪ್ರಾಪ್ತಿ ಉಂಟಾಗುತ್ತದೆ. ॥೭॥

**ಶ್ರೀಕೃಷ್ಣಾ ! ಪರಮಾತ್ಮ ಪ್ರಾಪ್ತನಾದ ಮನುಷ್ಯನ ಲಕ್ಷಣಗಳೇನು ?**

ಅವನ ಅಂತಃಕರಣವು ಯಾವಾಗಲೂ ಜ್ಞಾನ-ವಿಜ್ಞಾನಗಳಿಂದ ತೃಪ್ತವಾಗಿರುತ್ತದೆ; ಅವನಿಗೆ ಎಲ್ಲಾ ಇಂದ್ರಿಯಗಳ ಮೇಲೆ ಅಧಿಕಾರವಿರುತ್ತದೆ. ಅವನು ಎಲ್ಲಾ ಪರಿಸ್ಥಿತಿಗಳಲ್ಲಿಯೂ ನಿರ್ವಿಕಾರನಾಗಿರುತ್ತಾನೆ; ಮಣ್ಣು, ಹೆಂಟೆ, ಕಲ್ಲು ಹಾಗೂ ಬಂಗಾರದಲ್ಲಿ ಅವನಿಗೆ ಸಮ ಬುದ್ಧಿಯಿರುತ್ತದೆ, ಅಂತಹ ಯೋಗಿಯು ಸಮತ್ವವುಳ್ಳವನೆಂದು ಹೇಳಲ್ಪಡುತ್ತಾನೆ. ಕೇವಲ ಪದಾರ್ಥಗಳಲ್ಲಿಯೇ ಅಲ್ಲ, ಸಹೃದಯೀ, ಮಿತ್ರ, ಶತ್ರು, ಉದಾಸೀನ, ಮಧ್ಯಸ್ಥ, ದ್ವೇಷಿಸುವವ, ಬಂಧು, ಸಾಧು ಮತ್ತು ಪಾಪಿ ವ್ಯಕ್ತಿಗಳಲ್ಲಿಯೂ ಸಹ ಅವನಿಗೆ ಸಮ ಬುದ್ಧಿಯಿರುತ್ತದೆ. ಅಂತಹ ಆ ಸಮತ್ವಬುದ್ಧಿಯುಳ್ಳ ಮನುಷ್ಯನು ಸರ್ವ ಶ್ರೇಷ್ಠನಾಗಿದ್ದಾನೆ. ॥೮-೯॥

**ಆ ಸಮಬುದ್ಧಿಯು ಕೇವಲ ಕರ್ಮಯೋಗದಿಂದಲೇ ಉಂಟಾಗುತ್ತದೆಯೋ ಅಥವಾ ಯಾವುದಾದರೂ ಬೇರೆ ಸಾಧನೆಯಿಂದಲೂ ಸಹ ಉಂಟಾಗುತ್ತದೆಯೋ ?**

ಆ ಸಮಬುದ್ಧಿಯು ಧ್ಯಾನಯೋಗದಿಂದಲೂ ಸಹ ಉಂಟಾಗುತ್ತದೆ. ಆದುದರಿಂದ

ನಾನು ಆ ಧ್ಯಾನಯೋಗದ ವಿಧಿಯನ್ನು ತಿಳಿಸುತ್ತೇನೆ. ಧ್ಯಾನ ಯೋಗಿಯು ಭೋಗಬುದ್ಧಿಯಿಂದ ಸಂಗ್ರಹದ ತ್ಯಾಗಮಾಡಿ, ಕಾಮನಾ ರಹಿತನಾಗಿ, ಅಂತಃಕರಣ ಹಾಗೂ ಶರೀರವನ್ನು ವಶದಲ್ಲಿಟ್ಟುಕೊಂಡು ಹಾಗೂ ಏಕಾಂತದಲ್ಲಿ ಒಬ್ಬನೇ ಇದ್ದು ತನ್ನ ಮನಸ್ಸನ್ನು ನಿರಂತರ ಪರಮಾತ್ಮನಲ್ಲಿ ತೊಡಗಿಸಬೇಕು. ॥೧೦॥

**ಮನಸ್ಸನ್ನು ಪರಮಾತ್ಮನಲ್ಲಿ ತೊಡಗಿಸುವುದಕ್ಕೆ ಅರ್ಥಾತ್ ಧ್ಯಾನಮಾಡಲು ಉಪಯುಕ್ತ ವಿಚಾರಗಳೇನೇನು ಇವೆ?**

ಶುದ್ಧವಾದ ಪವಿತ್ರ ಸ್ಥಳದಲ್ಲಿ ಧ್ಯಾನಯೋಗಿಯು ಕ್ರಮಶಃ ದರ್ಭೆ, ಕೃಷ್ಣಾಜಿನ ಮತ್ತು ಶುದ್ಧವಾದ ವಸ್ತ್ರವನ್ನು ಹಾಸಿರಬೇಕು. ಆ ಆಸನವು ಅತ್ಯಂತ ಎತ್ತರವೂ ಮತ್ತು ಅತ್ಯಂತ ತಗ್ಗಾಗಿಯೂ ಇರಬಾರದು ಹಾಗೂ ಸ್ಥಿರವಾಗಿರಲಿ ಅರ್ಥಾತ್ ಅಲುಗಾಡುವಂತಹುದೂ ಆಗಿರಕೂಡದು. ॥೧೧॥

**ಅಂತಹ ಆಸನವನ್ನು ತಯಾರಿಸಿ ಏನು ಮಾಡಬೇಕು?**

ಆ ಆಸನದ ಮೇಲೆ ಕುಳಿತು ಮನಸ್ಸು ಮತ್ತು ಇಂದ್ರಿಯಗಳ ಕ್ರಿಯೆಗಳನ್ನು ವಶದಲ್ಲಿಟ್ಟುಕೊಳ್ಳುತ್ತಾ ಮನಸ್ಸನ್ನು ಏಕಾಗ್ರಗೊಳಿಸಿ ಅಂತಃಕರಣದ ಶುದ್ಧಿಗಾಗಿ ಧ್ಯಾನಯೋಗದ ಅಭ್ಯಾಸ ಮಾಡಬೇಕು. ॥೧೨॥

**ಆ ಆಸನದ ಮೇಲೆ ಯಾವ ಪ್ರಕಾರ ಕುಳಿತುಕೊಳ್ಳಬೇಕು?**

ಶರೀರ, ಕೊರಳು ಮತ್ತು ತಲೆಯನ್ನು ಒಂದು ಸೂತ್ರದಲ್ಲಿ (ನೇರವಾಗಿ) ಯೂ, ಅಚಲವಾಗಿಯೂ ಮಾಡಿಕೊಂಡು ಹಾಗೂ ಅತ್ತ-ಇತ್ತ ನೋಡದೆ ಕೇವಲ ತನ್ನ ನಾಸಿಕಾಗ್ರವನ್ನು ನೋಡುತ್ತಾ ಸ್ಥಿರವಾಗಿ ಕುಳಿತುಕೊಳ್ಳಬೇಕು. ॥೧೩॥

**ಅಂತಹ ಆಸನದಲ್ಲಿ ಯಾವ ಭಾವದಿಂದ ಕುಳಿತುಕೊಳ್ಳಬೇಕು?**

ಯಾರ ಅಂತಃಕರಣ ರಾಗ-ದ್ವೇಷ ಇತ್ಯಾದಿ ದ್ವಂದ್ವಗಳಿಂದ ರಹಿತವಾಗಿದೆಯೋ, ಯಾರು ನಿರ್ಭಯರಾಗಿದ್ದು ಬ್ರಹ್ಮಚರ್ಯ ವ್ರತವನ್ನು ಪಾಲಿಸುತ್ತಾರೆಯೋ, ಇಂತಹ ಜಾಗರೂಕನಾದ ಯೋಗಿಯು ಮನಸ್ಸನ್ನು ಪ್ರಾಪಂಚಿಕ ವಿಷಯಗಳಿಂದ ಹಿಮ್ಮೆಟ್ಟಿಸಿ ನನ್ನಲ್ಲಿಯೇ ತಲ್ಲೀನವಾಗಿಸುತ್ತಾ ನನ್ನ ಪಾರಾಯಣನಾಗಿ ಕುಳಿತುಕೊಳ್ಳಬೇಕು. ॥೧೪॥

**ಇದರ ಫಲ ಏನಾಗುವುದು?**

ಈ ಪ್ರಕಾರ ತನ್ನ ಮನಸ್ಸನ್ನು ನಿರಂತರ ನನ್ನಲ್ಲಿ ತೊಡಗಿಸುತ್ತಾ ವಶದಲ್ಲಿಟ್ಟುಕೊಂಡಿರುವ ಮನಸ್ಸುಳ್ಳ ಯೋಗಿಗೆ ನನ್ನಲ್ಲಿರುವ ನಿರ್ವಾಣ ಪರಮ-ಶಾಂತಿಯು ಲಭಿಸುತ್ತದೆ. ॥೧೫॥

**ಶ್ರೀಕೃಷ್ಣಾ! ಈ ಪ್ರಕಾರದಿಂದ ಧ್ಯಾನಮಾಡುವವರಾದರೋ ಅನೇಕರಾಗಿರುತ್ತಾರೆ, ಆದರೆ ಅವರೆಲ್ಲರ ಧ್ಯಾನಯೋಗವು ಏಕೆ ಸಿದ್ಧಿಯಾಗುವುದಿಲ್ಲ?**

ಎಲೈ ಅರ್ಜುನ! ಹೆಚ್ಚು ಆಹಾರ ಸೇವಿಸುವವನಿಗೆ ಮತ್ತು ಏನನ್ನೂ ತಿನ್ನದೇ ಇರುವವನಿಗೂ ಹಾಗೂ ಹೆಚ್ಚು ನಿದ್ರಿಸುವವನಿಗೆ ಮತ್ತು ನಿದ್ರೆಯನ್ನೇ ಮಾಡದಿರುವವನಿಗೂ ಈ ಯೋಗ ಸಿದ್ಧಿಸುವುದಿಲ್ಲ ॥೧೬॥

**ಹಾಗಾದರೆ ಯಾರ ಈ ಯೋಗವು ಸಿದ್ಧಿಸುತ್ತದೆ?**

ಯಾರ ಆಹಾರ (ಭೋಜನ) ಮತ್ತು ವಿಹಾರ (ಓಡಾಡುವುದು) ಸರಿಯಾಗಿದೆಯೋ, ಯಾರಿಗೆ ಕರ್ಮಗಳಲ್ಲಿ ಚೇಷ್ಟೆಗಳು ಯಥೋಚಿತವಾಗಿದೆಯೋ, ಯಾರ ಮಲಗುವುದು, ಎಚ್ಚರವಾಗಿರುವುದು ಸರಿಯಾಗಿದೆಯೋ ಅವರಿಗೆ ದುಃಖಗಳ ನಾಶ ಮಾಡುವಂತಹ ಈ ಯೋಗವು ಸಿದ್ಧಿಸುತ್ತದೆ. ॥೧೭॥

**ದುಃಖಗಳ ನಾಶ ಮಾಡುವಂತಹ ಈ ಯೋಗವು ಎಂದು ಸಿದ್ಧವಾಗುತ್ತದೆ?**

ಒಳ್ಳೆಯ ರೀತಿಯಿಂದ ವಶಮಾಡಿಕೊಂಡಿರುವ ಮನಸ್ಸು ತನ್ನ ಸ್ವರೂಪದಲ್ಲಿ ಮತ್ತು ಸ್ವತಃ ಎಲ್ಲಾ ಪದಾರ್ಥಗಳಿಂದ ಪೂರ್ಣವಾಗಿ ವಿಮುಖಗೊಂಡಾಗ ಅರ್ಥಾತ್ ತನಗಾಗಿ ಯಾವುದೇ ಪದಾರ್ಥದ ಆವಶ್ಯಕತೆ ಕಿಂಚಿತ್ ಮಾತ್ರವೂ ಸಹ ಇಲ್ಲವೆಂದು ತಿಳಿದುಕೊಂಡಾಗ, ಅವನನ್ನು ಯೋಗಿ ಎಂದು ಹೇಳುತ್ತಾರೆ ಅರ್ಥಾತ್ ಅವನ ಯೋಗವು ಸಿದ್ಧಿಸುತ್ತದೆ. ॥೧೮॥

**ಯೋಗಿಯ ಆ ಮನಸ್ಸಿನ ಸ್ಥಿತಿ ಹೇಗಿರುತ್ತದೆ?**

ನಿರ್ವಾತ ಸ್ಥಳದಲ್ಲಿಟ್ಟಿರುವ ದೀಪದ ದೀಪಶಿಖೆಯು ಸ್ವಲ್ಪವೂ ಸಹ ಅಲ್ಲಾಡುವುದಿಲ್ಲ - ಚಲಿಸುವುದಿಲ್ಲವೋ, ಅದರಂತೆಯೇ ಧ್ಯಾನಯೋಗದ ಅಭ್ಯಾಸ ಮಾಡುವ ಯೋಗಿಯ ಸ್ಥಿರ ಮನಸ್ಸಿನ ಸ್ಥಿತಿಯೂ ಆಗಿರುತ್ತದೆ. ॥೧೯॥

**ಮನಸ್ಸಿಗೆ ಅಂತಹ ಸ್ಥಿತಿಯುಂಟಾದ ಮೇಲೆ ಏನಾಗುತ್ತದೆ?**

ಯೋಗಾಭ್ಯಾಸದಿಂದ ನಿಗ್ರಹಿಸಿದ ಮನಸ್ಸು ಸಮಾಧಿ ಸುಖದಿಂದಲೂ ಸಹ ನಿವೃತ್ತವಾದಾಗ ಯೋಗಿಯು ತನ್ನಲ್ಲಿಯೇ ತನ್ನನ್ನು ಕಾಣುತ್ತಾ ಸ್ವತಃ ತನ್ನಲ್ಲಿ ತಾನೇ ಸಂತುಷ್ಟನಾಗಿಬಿಡುತ್ತಾನೆ. ॥೨೦॥

**ತನ್ನಲ್ಲಿ ತಾನೇ ಸಂತುಷ್ಟನಾದ ನಂತರ ಏನಾಗುತ್ತದೆ?**

ಎಲ್ಲೆಯೇ ಇಲ್ಲದ, ಇಂದ್ರಿಯಗಳಿಗಿಂತ ಮೀರಿದ ಮತ್ತು ಬುದ್ಧಿಯಿಂದ ಗ್ರಹಿಸಲು ಯೋಗ್ಯವಾದ ಸುಖದ ಅನುಭವ ಯೋಗಿಗೆ ಉಂಟಾಗುತ್ತದೆ. ಇಂತಹ ವಾಸ್ತವಿಕ

ಸುಖದಲ್ಲಿ(ಆನಂದದಲ್ಲಿ) ಸ್ಥಿತನಾದ ಮೇಲೆ ಆ ಧ್ಯಾನಯೋಗಿಯು ಪುನಃ ಎಂದಿಗೂ ತನ್ನ ಸ್ವರೂಪದಿಂದ ವಿಚಲಿತನಾಗುವುದಿಲ್ಲ. ॥೨೧॥

**ಆತನು ಯಾವ ಕಾರಣದಿಂದ ವಿಚಲಿತನಾಗುವುದಿಲ್ಲ?**

ಆತನು ಯಾವ ಲಾಭ (ಸುಖ)ವನ್ನು ಪಡೆಯುತ್ತಾನೆಯೋ ಅದಕ್ಕಿಂತ ಹೆಚ್ಚಿನ ಬೇರೆ ಯಾವ ಲಾಭ ಆತನ ಅರಿವಿಗೂ ಸಹ ಬರುವುದಿಲ್ಲ ಮತ್ತು ಅದರಲ್ಲಿ ಸ್ಥಿತನಾದ ಮೇಲೆ ಆತನನ್ನು ಬಹು ಹೆಚ್ಚಿನ ದುಃಖದಿಂದಲೂ ಸಹ ವಿಚಲಿತಗೊಳಿಸಲಾಗುವುದಿಲ್ಲ; ಏಕೆಂದರೆ ಆತನು ಯಾವ ಸ್ಥಿತಿಯಲ್ಲಿ ಸ್ಥಿರವಾಗಿದ್ದಾನೆಯೋ, ಅದರಲ್ಲಿ ಸುಖಕ್ಕೇನೂ ಕೊರತೆಯಿರುವುದಿಲ್ಲ ಮತ್ತು ದುಃಖವಂತೂ ಅಲ್ಲಿ ಸುಳಿಯುವುದೇ ಇಲ್ಲ. ॥೨೨॥

**ಅಂತಹ ವಿಲಕ್ಷಣ ಸುಖವನ್ನು ಪಡೆದುಕೊಳ್ಳಲು ಏನು ಮಾಡಬೇಕು?**

ದುಃಖಗಳೊಡನೆ ಸಂಯೋಗವೇ ಇಲ್ಲದಿರುವ ಅರ್ಥಾತ್ ಸಾಂಸಾರಿಕ ಸಂಬಂಧಗಳು ಸರ್ವಥಾ ತೊಡೆದುಹೋಗಿರುವುದನ್ನು 'ಯೋಗ' ಎಂಬ ಹೆಸರಿನಿಂದ ತಿಳಿದುಕೊಳ್ಳಬೇಕು. ಅಂತಹ ಯೋಗವನ್ನು ಬೇಸರವಿಲ್ಲದ ಮನಸ್ಸಿನಿಂದ ನಿಶ್ಚಯಪೂರ್ವಕ ಪಡೆದುಕೊಳ್ಳಬೇಕು. ॥೨೩॥

**ತನ್ನ ಸ್ವರೂಪದ ಧ್ಯಾನದಿಂದ ಪ್ರಾಪ್ತಿಯಾಗುವ ಯೋಗವು (ಸಾಧ್ಯರೂಪೀ ಸಮತೆ) ಪಡೆಯಲು ಯಾವುದಾದರೂ ಬೇರೆ ಉಪಾಯವಿರುವುದೇ?**

ಹೌದು, ನಿರ್ಗುಣ - ನಿರಾಕಾರದ ಧ್ಯಾನವಿದೆ. ಸಂಕಲ್ಪದಿಂದ ಉಂಟಾಗುವ ಎಲ್ಲಾ ಕಾಮನೆಗಳನ್ನು ಸರ್ವಥಾ ತ್ಯಾಗಮಾಡಿ ಮತ್ತು ಮನಸ್ಸಿನಿಂದ ಇಂದ್ರಿಯ ಸಮೂಹವನ್ನು ಎಲ್ಲ ಕಡೆಗಳಿಂದ ತೊಡೆದು ಧೈರ್ಯಯುಕ್ತ ಬುದ್ಧಿಯ ಮೂಲಕ ಕ್ರಮೇಣ ಸಂಸಾರದಿಂದ ವಿರಕ್ತನಾಗಬೇಕು; ಬಳಿಕ ಎಲ್ಲೆಲ್ಲಿಯೂ ಪರಿಪೂರ್ಣನಾದ ಪರಮಾತ್ಮನಲ್ಲಿ ಮನಸ್ಸು ಬುದ್ಧಿಗಳನ್ನು ಸ್ಥಿರಗೊಳಿಸಿಕೊಂಡು ಮತ್ತೆ ಏನನ್ನೂ ಸಹ ಚಿಂತನೆ ಮಾಡಬಾರದು. ॥೨೪-೨೫॥

**ಒಂದು ವೇಳೆ ಚಿಂತನೆಯುಂಟಾದರೆ?**

ಅಭ್ಯಾಸ ಮಾಡಬೇಕು ಅರ್ಥಾತ್ ಈ ಅಸ್ಥಿರ ಮತ್ತು ಚಂಚಲವಾದ ಮನಸ್ಸು ಎಲ್ಲೆಲ್ಲಿ ಹೋದರೂ, ಅಲ್ಲಲ್ಲಿಂದ ಹಿಮ್ಮೆಟ್ಟಿಸಿ ಇದನ್ನು ಏಕಮೇವ ಪರಮಾತ್ಮನಲ್ಲಿಯೇ ತೊಡಗಿಸಬೇಕು. ॥೨೬॥

**ಹೀಗೆ ಮಾಡುವುದರಿಂದ ಏನಾಗುವುದು?**

ರಜೋಗುಣದ ವೃತ್ತಿಗಳಿಂದ ಹೊರತಾದ ಶಾಂತ ಮನಸ್ಸಿನ ಪಾಪರಹಿತ

ಮತ್ತು ಬ್ರಹ್ಮಸ್ವರೂಪೀ ಯೋಗಿಗೆ ಉತ್ತಮವಾದ (ಸಾತ್ತ್ವಿಕ) ಸುಖದ ಪ್ರಾಪ್ತಿಯುಂಟಾಗಬಹುದು. ॥೨೭॥

**ತದನಂತರ ಏನಾಗುವುದು?**

ಸ್ವತಃ ತನ್ನನ್ನು ಸದಾ ಪರಮಾತ್ಮನಲ್ಲಿ ತೊಡಗಿಸಿಕೊಳ್ಳುತ್ತಾ ಆ ಪಾಪ ರಹಿತ ಯೋಗಿಗೆ ಸುಖವಾಗಿ ಬ್ರಹ್ಮಸ್ವರೂಪೀಯಾದ ಅತ್ಯಂತ ಸುಖವು ದೊರೆಯುತ್ತದೆ. ॥೨೮॥

**ಇದುವರೆಗೂ ಸಗುಣ-ಸಾಕಾರದ ನಿನ್ನ ಸ್ವರೂಪದ ಮತ್ತು ನಿರ್ಗುಣ -ನಿರಾಕಾರದ ಧ್ಯಾನಮಾಡುವವರ ವರ್ಣನೆಯನ್ನು ನೀನು ಮಾಡಿದೆ, ಆದರೆ ಅವರು ಜಗತ್ತನ್ನು ಯಾವ ದೃಷ್ಟಿಯಿಂದ ನೋಡುತ್ತಾರೆ, ಎಂಬ ವಿಷಯದ ವರ್ಣನೆ ಮಾಡಲಿಲ್ಲ. ಪರಮಾತ್ಮಾ! ತನ್ನ ಸ್ವರೂಪದ ಧ್ಯಾನ ಮಾಡುವವನು ಈ ಜಗತ್ತನ್ನು ಯಾವ ದೃಷ್ಟಿಯಿಂದ ನೋಡುತ್ತಾನೆ ಎಂಬುದನ್ನು ಈಗ ತಿಳಿಸು?**

ಧ್ಯಾನಯೋಗದಿಂದ ಕೂಡಿದ ಅಂತಃಕರಣವುಳ್ಳ ಆ ಯೋಗಿಯು ತನ್ನನ್ನು ತಾನೇ (ಸ್ವರೂಪವನ್ನು) ಎಲ್ಲಾ ಪ್ರಾಣಿಗಳಲ್ಲಿಯೂ ಕಾಣುತ್ತಾನೆ ಮತ್ತು ಎಲ್ಲಾ ಪ್ರಾಣಿಗಳನ್ನೂ ತಾನೇ ತನ್ನಲ್ಲಿ (ಸ್ವರೂಪದಲ್ಲಿ) ಕಾಣುತ್ತಾನೆ; ಆದುದರಿಂದ ಅವನು ಸಮದರ್ಶಿಯಾಗುತ್ತಾನೆ. ॥೨೯॥

**ನಿನ್ನ ಸಗುಣ -ಸಾಕಾರ ಸ್ವರೂಪದ ಧ್ಯಾನಮಾಡುವವನು, ಈ ಜಗತ್ತನ್ನೂ ಯಾವ ದೃಷ್ಟಿಯಿಂದ ನೋಡುತ್ತಾನೆ?**

ಅವನು ಎಲ್ಲರಲ್ಲಿಯೂ ನನ್ನನ್ನೇ ಕಾಣುತ್ತಾನೆ ಮತ್ತು ಎಲ್ಲರನ್ನು ನನ್ನಲ್ಲಿಯೇ ನೋಡುತ್ತಾನೆ. ಆದುದರಿಂದ ಅವನ ಮುಂದೆ ನಾನು ಅದೃಶ್ಯನಾಗುವುದಿಲ್ಲ ಮತ್ತು ಅವನು ನನ್ನ ಮುಂದೆ ಅದೃಶ್ಯನಾಗುವುದಿಲ್ಲ. ॥೩೦॥

**ನೀನು ಮತ್ತು ಆ ಯೋಗಿ - ಇಬ್ಬರೂ ಒಬ್ಬರಿಗೊಬ್ಬರು ಏಕೆ ಅದೃಶ್ಯರಾಗುವುದಿಲ್ಲ?**

ಆತನು ಎಲ್ಲಾ ಪ್ರಾಣಿಗಳಲ್ಲಿ ಸ್ಥಿತನಾದ ನನ್ನೊಡನೆ ಒಂದಾಗಿ ಹೋಗಿ ನನ್ನನ್ನು ಭಜಿಸುತ್ತಾನೆ. ಆದುದರಿಂದ ಆತನು ಎಲ್ಲರೊಡನೆಯೂ ಯಥೋಚಿತವಾಗಿ ವರ್ತಿಸುತ್ತಾ ಇದ್ದರೂ ಸಹ ನಿತ್ಯ - ನಿರಂತರ ನನ್ನಲ್ಲಿಯೇ ಸ್ಥಿತನಾಗಿರುತ್ತಾನೆ ಹೀಗಿರುವಾಗ ನಾವಿಬ್ಬರೂ ಒಬ್ಬರಿಗೆ ಮತ್ತೊಬ್ಬರು ಹೇಗೆ ಅದೃಶ್ಯರಾಗಬಲ್ಲೆವು? ಆಗಲಾರೆವು ॥೩೧॥

**ನಿನ್ನ ನಿರ್ಗುಣ-ನಿರಾಕಾರ ಸ್ವರೂಪದ ಧ್ಯಾನಮಾಡುವವನು ಈ ಜಗತ್ತನ್ನು ಯಾವ ದೃಷ್ಟಿಯಿಂದ ನೋಡುತ್ತಾನೆ?**

ಅಜ್ಞಾನಿ ಮನುಷ್ಯನು ತನ್ನ ಶರೀರದ ಅಂಗಗಳಲ್ಲಿ ಹಾಗೂ ಅವುಗಳ ಸುಖ ದುಃಖದಲ್ಲಿ ತನ್ನನ್ನು ಸಮಾನವಾಗಿಯೇ ಕಾಣುತ್ತಾನೋ, ಅದರಂತೆಯೇ ಆ ಯೋಗಿಯು ತನ್ನ ಶರೀರದಂತೆಯೇ ಎಲ್ಲಾ ಪ್ರಾಣಿಗಳಲ್ಲಿ ಹಾಗೂ ಅವುಗಳ ಸುಖ-ದುಃಖದಲ್ಲಿ ತನ್ನನ್ನು ಸಮಭಾಗಿಯಾಗಿ ಕಾಣುತ್ತಾನೆ. ಆದುದರಿಂದ ಆ ಯೋಗಿಯು ಸರ್ವಶ್ರೇಷ್ಠನೆಂದು ಭಾವಿಸಲಾಗಿದೆ. ॥೩೨॥

**ಅರ್ಜುನ ಹೇಳಿದನು - ಇದುವರೆಗೂ ನೀನು ಸಮತೆಯನ್ನು ಪಡೆಯುವುದಕ್ಕಾಗಿ ಧ್ಯಾನಯೋಗದ ವರ್ಣನೆ ಮಾಡಿದೆ. ಹೇ ಮಧುಸೂದನ! ಮನಸ್ಸಿನ ಚಂಚಲತೆಯ ಕಾರಣ ಆ ಧ್ಯಾನಯೋಗದಲ್ಲಿ ಸ್ಥಿರವಾಗಿರುವುದಕ್ಕೆ ನನಗೆ ಬಹಳ ಕಠಿನವಾಗಿ ಕಂಡುಬರುತ್ತದೆ; ಏಕೆಂದರೆ ಹೇ ಕೃಷ್ಣ! ಮನಸ್ಸು ಬಹು ಚಂಚಲ, ಮಥಿಸುವ ಸ್ವಭಾವವುಳ್ಳದ್ದು, ಬಲಶಾಲಿ ಮತ್ತು ಹಟವಾದಿಯಾಗಿದೆ. ಅದನ್ನು ನಿಗ್ರಹಿಸುವುದು (ಹತೋಟಿಯಲ್ಲಿಡುವುದು) ವಾಯುವನ್ನು ಅಂಕೆಯಲ್ಲಿ ಇಡುವ ರೀತಿಯಲ್ಲಿ ಅತ್ಯಂತ ಕಷ್ಟಸಾಧ್ಯವೆಂದು ನಾನು ಭಾವಿಸಿದ್ದೇನೆ. ॥೩೩-೩೪॥**

ಭಗವಂತ ಹೇಳಿದನು - ನೀನು ಹೇಳುವುದು ಖಂಡಿತ ಸರಿಯಾಗಿದೆ. ಮಹಾಬಾಹು! ವಾಸ್ತವವಾಗಿಯೂ ಈ ಮನಸ್ಸು ಬಹು ಚಂಚಲ ಮತ್ತು ಇದನ್ನು ಅಂಕೆಯಲ್ಲಿಡುವುದಂತೂ ಬಹಳ ಕಷ್ಟ. ಆದರೆ ಹೇ ಕುಂತೀನಂದನ! ಅಭ್ಯಾಸ ಮತ್ತು ವೈರಾಗ್ಯದಿಂದ ಇದನ್ನು ನಿಗ್ರಹಿಸಲಾಗುತ್ತದೆ. ಆದುದರಿಂದ ಮನಸ್ಸು ಮತ್ತು ಇಂದ್ರಿಯಗಳು ವಶದಲ್ಲಿಲ್ಲದವನ ಮೂಲಕ ಧ್ಯಾನಯೋಗ ಸಿದ್ಧಿಯಾಗುವುದು ಕಷ್ಟವಾಗಿದೆ. ಆದರೆ ಮನಸ್ಸು ಮತ್ತು ಇಂದ್ರಿಯಗಳು ವಶದಲ್ಲಿರುವವನಿಂದ ಧ್ಯಾನ ಯೋಗವು ಸಿದ್ಧಿಯಾಗಬಲ್ಲದು - ಎಂಬುದೇ ನನ್ನ ಅಭಿಪ್ರಾಯವಾಗಿದೆ. ॥೩೫-೩೬॥

**ಅರ್ಜುನ ಹೇಳಿದನು - ಹೇ ಕೃಷ್ಣ! ಸಾಧನೆಯಲ್ಲಿ ಶ್ರದ್ಧೆಯಿದೆ, ಆದರೆ ಪ್ರಯತ್ನದಲ್ಲಿ ಶಿಥಿಲತೆ ಇದೆ, ಅಂತಹ ಸಾಧಕನ ಅಂತ್ಯಕಾಲದಲ್ಲಿ ಸಾಧನೆಯ ಸ್ಥಿತಿಯಿರದೇ ಹೋದರೆ ಆತನು ಯೋಗಸಿದ್ಧಿಯನ್ನು ಪಡೆಯದೆ ಯಾವ ಗತಿಗೆ ಹೋಗುತ್ತಾನೆ? ಸಂಸಾರದ ಆಶ್ರಯವೂ ಇಲ್ಲದ ಮತ್ತು ಪರಮಾತ್ಮನ ಪ್ರಾಪ್ತಿಯ ಮಾರ್ಗದಲ್ಲಿಯೂ ವಿಚಲಿತನಾಗಿ ಉಭಯ ಭ್ರಷ್ಟನಾದ ಸಾಧಕನು ಛಿನ್ನ-ಭಿನ್ನವಾದ ಮೋಡದಂತೆ ಹಾಳಾಗಿ ಹೋಗುವುದಿಲ್ಲವೇ ? ಹೇ ಶ್ರೀಕೃಷ್ಣ!**

**ಇದೇ ನನ್ನ ಸಂದೇಹ. ನನ್ನ ಈ ಸಂದೇಹವನ್ನು ನೀನೇ ಪೂರ್ಣವಾಗಿ ಹೋಗಲಾಡಿಸುವೆ; ಏಕೆಂದರೆ ಈ ಸಂದೇಹವನ್ನು ನಿನ್ನ ಹೊರತು ಬೇರೆ ಯಾರೂ ಸಹ ಪರಿಹರಿಸಲಾರರು. ॥೩೭-೩೯॥**

ಭಗವಂತ ಹೇಳಿದನು - ಎಲೈ ಪಾರ್ಥ! ಅವನಿಗೆ ಈ ಲೋಕದಲ್ಲಿಯೇ ಆಗಲೀ ಮತ್ತು ಪರಲೋಕದಲ್ಲಿಯೇ ಆಗಲಿ ಪತನವುಂಟಾಗುವುದಿಲ್ಲ; ಏಕೆಂದರೆ ಹೇ ಪ್ರೀತಿಪಾತ್ರನೇ! ಶ್ರೇಯಸ್ಕರವಾದ ಕಾರ್ಯಗಳನ್ನು ಮಾಡುವ ಯಾವ ಸಾಧಕನೂ ಸಹ ದುರ್ಗತಿಯನ್ನು ಹೊಂದುವುದಿಲ್ಲ. ॥೪೦॥

**ಅವನು ದುರ್ಗತಿಗೆ ಹೋಗದಿದ್ದರೆ ಮತ್ತೆಲ್ಲಿಗೆ ಹೋಗುತ್ತಾನೆ?**

ಯಾವ ಸಾಧಕನ ಅಂತಃಕರಣದಲ್ಲಿ ಸಾಂಸಾರಿಕ ಸುಖದ ಇಚ್ಛೆಯು ಅಲ್ಪಸ್ವಲ್ಪವಾದರೂ ಉಳಿದಿರುವುದೋ ಅಂತಹ ಯೋಗಭ್ರಷ್ಟ ಸಾಧಕನು ಪುಣ್ಯ ಕಾರ್ಯಗಳನ್ನು ಮಾಡುವವರ ಲೋಕಗಳಿಗೆ (ಸ್ವರ್ಗ ಮುಂತಾದ ಶ್ರೇಷ್ಠ ಲೋಕಗಳಿಗೆ) ಹೋಗುತ್ತಾನೆ ಮತ್ತು ಅಲ್ಲಿ ಬಹಳ ವರ್ಷಗಳವರೆಗೆ ಇದ್ದು ನಂತರ ಮೃತ್ಯು ಲೋಕದಲ್ಲಿ ಶುದ್ಧ ಶ್ರೀಮಂತರ ಮನೆಯಲ್ಲಿ, ಜನ್ಮತಾಳುತ್ತಾನೆ. ಆದರೆ ಯಾವ ಸಾಧಕನಲ್ಲಿ ಸಾಂಸಾರಿಕ ಸುಖದ ಇಚ್ಛೆಯಿಲ್ಲವೋ ಮತ್ತು ಅಂತ್ಯ ಕಾಲದಲ್ಲಿ ಏನಾದರೂ ವಿಶೇಷ ಕಾರಣದಿಂದ ಯೋಗಭ್ರಷ್ಟನಾಗಿ ಹೋಗುತ್ತಾನೋ, ಅವನು ಸ್ವರ್ಗಾದಿ ಲೋಕಗಳಿಗೆ ಹೋಗದೆ ನೇರವಾಗಿಯೇ ತತ್ತ್ವಜ್ಞರಾದ ಯೋಗಿಗಳ ಕುಲದಲ್ಲಿ ಹುಟ್ಟುತ್ತಾನೆ. ಈ ಪ್ರಕಾರದ ಜನ್ಮವು ಈ ಲೋಕದಲ್ಲಿ ಅತ್ಯಂತ ದುರ್ಲಭವಾಗಿದೆ. ॥೪೧-೪೨॥

**ತತ್ತ್ವಜ್ಞರಾದ ಯೋಗಿಗಳ ಕುಲದಲ್ಲಿ ಹುಟ್ಟಿದ ಮೇಲೆ ಏನಾಗುತ್ತದೆ?**

ಎಲೈ ಕುರುನಂದನ! ಅಲ್ಲಿ ಅವನಿಗೆ ಹಿಂದಿನ ಜನ್ಮದಲ್ಲಿ ಮಾಡಿದ ಸಾಧನ ಸಾಮಗ್ರಿಯು ಅನಾಯಾಸವಾಗಿ ದೊರೆಯುತ್ತದೆ. ಅದರಿಂದ ಅವನು ಸಾಧನೆಯ ಸಿದ್ಧಿಗಾಗಿ ಪುನಃ ತತ್ಪರತೆಯಿಂದ ಪ್ರಯತ್ನ ಪಡುತ್ತಾನೆ. ॥೪೩॥

**ನೀನು ತತ್ತ್ವಜ್ಞರಾದ ಯೋಗಿಗಳ ಕುಲದಲ್ಲಿ ಹುಟ್ಟುವವರ ವಿಚಾರವನ್ನು ತಿಳಿಸಿದೆ; ಈಗ ಶುದ್ಧ ಶ್ರೀಮಂತರ ಮನೆಯಲ್ಲಿ ಹುಟ್ಟುವವರು ಏನಾಗುತ್ತಾರೆ? ಎಂಬುದನ್ನು ತಿಳಿಸು.**

ಆ ಯೋಗಭ್ರಷ್ಟನು ಭೋಗಗಳಿಗೆ ಪರವಶನಾಗುತ್ತಿದ್ದರೂ ಸಹ ಹಿಂದಿನ ಜನ್ಮದಲ್ಲಿ ಮಾಡಿದ ಅಭ್ಯಾಸ (ಸಾಧನೆ)ದ ಕಾರಣದಿಂದ ಪರಮಾತ್ಮನ ಕಡೆಗೆ ಆಕರ್ಷಿತನಾಗುತ್ತಾನೆ.

**ಶ್ರೀಕೃಷ್ಣ! ಅವನು ಸಾಧನೆಯಲ್ಲಿ ಬಲವಂತವಾಗಿ ಆಕರ್ಷಿತನಾಗುವಂತಹ ಯಾವ ಶಕ್ತಿ ಪೂರ್ವಾಭ್ಯಾಸದಲ್ಲಿದೆ?**

ಅಯ್ಯಾ! ಯೋಗದ ಜಿಜ್ಞಾಸುವೂ ಸಹ ವೇದಗಳಲ್ಲಿ ಹೇಳಿರುವ ಸಕಾಮ ಕರ್ಮಗಳನ್ನು ಅತಿಕ್ರಮಿಸಿ ಹೋಗುತ್ತಾನೆ, ಅಂದಮೇಲೆ ಯೋಗಭ್ರಷ್ಟ ಮತ್ತು ಯೋಗದಲ್ಲಿ ತೊಡಗಿರುವವನ ಬಗ್ಗೆ ಹೇಳಬೇಕಾದುದೇನು ! ॥೪೪॥

**ಪರಮಾತ್ಮನ ಕಡೆಗೆ ಆಕರ್ಷಿತನಾದ ನಂತರ ಏನಾಗುತ್ತದೆ?**

ಅವನು ಬಹಳ ತೀವ್ರಗತಿಯಿಂದ ಸಾಧನೆಯಲ್ಲಿ ತೊಡಗುತ್ತಾನೆ ಮತ್ತು ಸಂಪೂರ್ಣವಾಗಿ ಪಾಪರಹಿತನಾಗಿ ಅವನು ಅನೇಕ ಜನ್ಮಗಳಿಂದ ಸಿದ್ಧಿಸಿದ (ಸಾಧಕನು) ಪರಮಗತಿಯಾದ ಪರಮಾತ್ಮನನ್ನು ಪಡೆಯುತ್ತಾನೆ. ॥೪೫॥

**ಪರಮಗತಿಯನ್ನು ಪಡೆಯುವ ಯೋಗಿಯ ಮಹತ್ತ್ವವೇನು?**

ಆ ಯೋಗಿಯು ಸಕಾಮಭಾವನೆಯುಳ್ಳ ತಪಸ್ವಿಗಳಿಗಿಂತಲೂ, ಜ್ಞಾನಿಗಳಿಗಿಂತಲೂ ಮತ್ತು ಕರ್ಮಿಗಳಿಗಿಂತಲೂ ಸಹ ಶ್ರೇಷ್ಠನೆಂಬುದೇ ನನ್ನ ಅಭಿಪ್ರಾಯ. ಆದುದರಿಂದ ಎಲೈ ಅರ್ಜುನ! ನೀನೂ ಸಹ ಯೋಗಿಯೇ ಆಗು. ॥೪೬॥

**ಯೋಗಿಗಳಲ್ಲಿಯೂ ಸಹ ಶ್ರೇಷ್ಠನು ಯಾರು?**

ನನ್ನಲ್ಲಿಯೇ ತಲ್ಲೀನವಾದ ಅಂತಃಕರಣದಿಂದ ಶ್ರದ್ಧಾ- ಪ್ರೇಮಪೂರ್ವಕ ನನ್ನನ್ನು ಭಜಿಸುವಂತಹ ಆ ನನ್ನ ಭಕ್ತನು ಎಲ್ಲ ಯೋಗಿಗಳಲ್ಲಿ ಶ್ರೇಷ್ಠನಾಗಿದ್ದಾನೆ. ॥೪೭॥



# ಏಳನೇ ಅಧ್ಯಾಯವು

**ಯಾರನ್ನು ನೀನು ಸರ್ವಶ್ರೇಷ್ಠ ಯೋಗಿಯೆಂದು ಭಾವಿಸುವೆಯೋ ನಾನೂ ಸಹ ಅವನಂತೆ ಆಗಬಲ್ಲೆನೇನು ?**

ಖಂಡಿತ ಆಗಬಲ್ಲೆ.

**ಹೇಗೆ ?**

ಶ್ರೀಕೃಷ್ಣ ಹೇಳಿದನು - ಎಲೈ ಪಾರ್ಥ! ನೀನು ನನ್ನಲ್ಲಿಯೇ ಆಸಕ್ತ ಮನಸ್ಸುಳ್ಳವನಾಗಿ ಮತ್ತು ನನ್ನನ್ನೇ ಆಶ್ರಯಿಸಿ, ನನ್ನನ್ನು ಭಜಿಸುತ್ತಾ ನಿಃಸಂದೇಹವಾಗಿ ನನ್ನ ಸಮಗ್ರರೂಪವನ್ನು ತಿಳಿದುಕೊಳ್ಳುವೆ, ನೀನು ಯಾವ ಪ್ರಕಾರ ನನ್ನ ಸಮಗ್ರ ರೂಪವನ್ನು ತಿಳಿಯುವೆಯೋ ಅದನ್ನು ನನ್ನಿಂದ ಕೇಳು. ಆ ಸಮಗ್ರ ರೂಪವನ್ನು ತಿಳಿಯುವುದಕ್ಕಾಗಿ ನಾನು ನಿನಗೆ ವಿಜ್ಞಾನ ಸಹಿತ ಜ್ಞಾನವನ್ನು ಸಂಪೂರ್ಣವಾಗಿ ಹೇಳುವೆನು; ಅದನ್ನು ತಿಳಿದುಕೊಂಡ ನಂತರ ನೀನು ಈ ಮಾನವಲೋಕದಲ್ಲಿ ತಿಳಿದುಕೊಳ್ಳಬೇಕಾದದ್ದು ಏನೂ ಬಾಕಿ ಉಳಿದಿರುವುದಿಲ್ಲ. ॥೧-೨॥

**ಇಂತಹ ವಿಚಾರವಿರುವುದಾದರೆ ಎಲ್ಲಾ ಮನುಷ್ಯರೂ ನಿನ್ನ ಸಮಗ್ರರೂಪವನ್ನು ಏಕೆ ಅರಿತುಕೊಳ್ಳುವುದಿಲ್ಲ?**

ಇತ್ತಕಡೆ ಕಡಿಮೆ ಮನುಷ್ಯರಲ್ಲಿ ಸ್ವತಃ ಪ್ರವೃತ್ತಿಯಿರುತ್ತದೆ. ಸಾವಿರಾರು ಮಂದಿಗಳಲ್ಲಿ ಯಾರೋ ಒಬ್ಬ ತನ್ನ ಶ್ರೇಯಸ್ಸಿಗಾಗಿ ಯತ್ನಿಸುತ್ತಾನೆ. ಯತ್ನಶೀಲರಾದ ಆ ಸಿದ್ಧರಲ್ಲಿ (ಸಾಧಕರಲ್ಲಿ) ಸಹ ಯಾರೋ ಒಬ್ಬನೇ ನನ್ನ ಸಮಗ್ರ ರೂಪವನ್ನು ತತ್ತ್ವದಿಂದ ತಿಳಿಯುತ್ತಾನೆ. ॥೩॥

**ನಿನ್ನ ಆ ಸಮಗ್ರ ರೂಪವು ಯಾವುದು ?**

ಎಲೈ ಮಹಾಬಾಹು ! ಪೃಥ್ವಿ, ಜಲ, ತೇಜಸ್ಸು, ವಾಯು, ಆಕಾಶ, ಮನಸ್ಸು ಬುದ್ಧಿ ಮತ್ತು ಅಹಂಕಾರ - ಈ ಪ್ರಕಾರವಾಗಿ ನನ್ನ 'ಅಪರಾ' (ಜಡ) ಪ್ರಕೃತಿಯು ಎಂಟು ವಿಧವಾಗಿರುತ್ತದೆ. ಇದಕ್ಕಿಂತ ಸರ್ವಥಾ ಭಿನ್ನವಾದದ್ದು ನನ್ನ ಜೀವರೂಪೀ 'ಪರಾ' (ಚೇತನ) ಪ್ರಕೃತಿಯಾಗಿದೆ. ಅದು (ಅಹಂಕಾರ-ಮಮಕಾರದಿಂದ) ಈ ಜಗತ್ತನ್ನು ಧರಿಸಿಕೊಂಡಿದೆ, ಈ ಅಪರಾ ಮತ್ತು ಪರಾ - ಎಂಬ ಎರಡೂ ಪ್ರಕೃತಿಗಳ ಸಂಯೋಗದಿಂದಲೇ ಸಕಲ ಪ್ರಾಣಿವರ್ಗ ಉತ್ಪತ್ತಿಯಾಗುತ್ತವೆ.

**ಹೇ ದೇವ ! ಇವುಗಳಿಗೂ ಸಹ ಮೂಲ ಕಾರಣ ಯಾರು ?**

ನಾನೇ ಇಡೀ ಜಗತ್ತಿಗೆ ಮೂಲ ಕಾರಣನಾಗಿದ್ದೇನೆ. ಏಕೆಂದರೆ ಜಗತ್ತು ನನ್ನಿಂದಲೇ ಉತ್ಪತ್ತಿಯಾಗುತ್ತದೆ ಮತ್ತು ನನ್ನಲ್ಲಿಯೇ ಲೀನವಾಗುತ್ತದೆ. ಎಲೈ ಧನಂಜಯ ! ನನ್ನ ಹೊರತು ಈ ಪ್ರಪಂಚಕ್ಕೆ ಬೇರೆ ಯಾರೂ ಕಿಂಚಿತ್ತೂ ಸಹ ಕಾರಣರಿಲ್ಲ. ದಾರದಿಂದ ರಚಿಸಿದ ಮಣಿಗಳು ದಾರದಲ್ಲಿಯೇ ಪೋಣಿಸಿದರೆ ಆ ಹಾರದಲ್ಲಿ ಎಲ್ಲವೂ ದಾರವೇ ಆಗಿರುವಂತೆ ಇಡೀ ಪ್ರಪಂಚದಲ್ಲಿ ನಾನೇ ನಾನಾಗಿರುತ್ತೇನೆ. ॥೬-೭॥

**ಹಾಗಾದರೆ, ಪರಮಾತ್ಮಾ! ಈ ವಿಚಾರವನ್ನು ನಾನು ಹೇಗೆ ತಿಳಿದುಕೊಳ್ಳಲಿ ?**

ಎಲೈ ಕುಂತೀನಂದನ ! ನೀರಿನಲ್ಲಿ ರಸ ನಾನಾಗಿದ್ದೇನೆ, ಸೂರ್ಯ ಮತ್ತು ಚಂದ್ರರಲ್ಲಿ ನಾನು ಪ್ರಭೆ(ಪ್ರಕಾಶ)ಯಾಗಿದ್ದೇನೆ, ಸಂಪೂರ್ಣ ವೇದಗಳಲ್ಲಿ ನಾನು ಪ್ರಣವ (ಓಂಕಾರ)ವಾಗಿದ್ದೇನೆ, ಆಕಾಶದಲ್ಲಿ ಶಬ್ದವು ನಾನಾಗಿದ್ದೇನೆ, ಮನುಷ್ಯರಲ್ಲಿ ಪುರುಷಾರ್ಥ ನಾನಾಗಿದ್ದೇನೆ. ಪೃಥ್ವಿಯಲ್ಲಿ ಪವಿತ್ರ ಗಂಧವೂ, ಅಗ್ನಿಯಲ್ಲಿ ತೇಜಸ್ಸೂ ನಾನಾಗಿದ್ದೇನೆ, ಸಕಲ ಪ್ರಾಣಿಗಳಲ್ಲಿನ ಜೀವ-ಶಕ್ತಿಯೂ ಮತ್ತು ತಪಸ್ವಿಗಳಲ್ಲಿನ ತಪಸ್ಸೂ ನಾನೇ ಆಗಿದ್ದೇನೆ. ಹೇ ಪಾರ್ಥ ! ಸಂಪೂರ್ಣ ಪ್ರಾಣಿಗಳ ಅನಾದಿ ಬೀಜ ನಾನೇ ಎಂದು ತಿಳಿದುಕೋ. ಬುದ್ಧಿವಂತರಲ್ಲಿನ ಬುದ್ಧಿ ಮತ್ತು ತೇಜಸ್ವೀ ಪುರುಷರಲ್ಲಿನ ತೇಜಸ್ಸು (ಪ್ರಭಾವ) ನಾನಾಗಿದ್ದೇನೆ. ಎಲೈ ಭರತ ವಂಶೀಯರಲ್ಲಿ ಶ್ರೇಷ್ಠನಾದ ಅರ್ಜುನ ! ಬಲಶಾಲಿಗಳಲ್ಲಿರುವ ಕಾಮನೆ ಮತ್ತು ಆಸಕ್ತಿ ರಹಿತವಾದ (ಸಾತ್ತ್ವಿಕ) ಬಲವು ನಾನೇ. ಮನುಷ್ಯರಲ್ಲಿನ ಧರ್ಮಯುಕ್ತ ಕಾಮವು ನಾನಾಗಿದ್ದೇನೆ. ಮತ್ತಿನ್ನೇನು ಹೇಳಲಿ ! ಎಷ್ಟೊಂದು ಸಾತ್ತ್ವಿಕ, ರಾಜಸ ಮತ್ತು ತಾಮಸ ಭಾವಗಳಿವೆಯೋ, ಅವುಗಳೆಲ್ಲವೂ ನನ್ನಿಂದಲೇ ಉಂಟಾಗುತ್ತವೆ - ಎಂಬುದಾಗಿ ತಿಳಿ ; ಆದರೆ ನಾನು ಅವುಗಳಲ್ಲಿ ಮತ್ತು ಅವು ನನ್ನಲ್ಲಿ ಇಲ್ಲ ಅರ್ಥಾತ್ ನಾನು ಅವುಗಳಿಂದ ಸರ್ವಥಾ ಅತೀತ, ನಿರ್ಲಿಪ್ತನಾಗಿದ್ದೇನೆ. ॥೮-೧೨॥

**ಒಂದು ವೇಳೆ ಇಂತಹ ಮಾತಿದ್ದರೆ ಎಲ್ಲ ಜನರೂ ನಿನ್ನನ್ನು ಹೇಗೆ ಏಕೆ ತಿಳಿಯುವುದಿಲ್ಲ?**

ಅವರು ಸತ್ತ್ವ, ರಜ ಮತ್ತು ತಮ - ಈ ಮೂರು ಗುಣಗಳಿಂದ ಮೋಹಿತರಾಗಿರುತ್ತಾರೆ ಅರ್ಥಾತ್ ಸಾಂಸಾರದಲ್ಲಿಯೇ ಮುಳುಗಿರುತ್ತಾರೆ. ಆದ್ದರಿಂದ ಅವರು ಈ ಮೂರು ಗುಣಗಳಿಂದ ಅತೀತ ಮತ್ತು ಅವಿನಾಶಿಯಾದ ನನ್ನನ್ನು ಅರಿಯಲಾರರು. ॥೧೩॥

**ಹಾಗಾದರೆ ನಿನ್ನನ್ನೂ ಯಾರು ತಿಳಿದುಕೊಳ್ಳುವರು ?**

ಈ ಮೂರು ಗುಣಗಳುಳ್ಳ ನನ್ನ ಮಾಯೆಯನ್ನು ದಾಟುವುದು ಬಹಳ ಕಷ್ಟವಾಗಿದೆ. ಈ ಮಾಯೆಯಿಂದ ವಿಮುಖರಾಗಿ ಕೇವಲ ನನ್ನಲ್ಲಿಯೇ ಶರಣಾಗುವವರು ನನ್ನ ಕೃಪೆಯಿಂದ ಈ ಮಾಯೆಯನ್ನು ದಾಟಿ ಹೋಗುತ್ತಾರೆ. ಅರ್ಥಾತ್ ನನ್ನನ್ನು ತಿಳಿದುಕೊಳ್ಳುತ್ತಾರೆ. ॥೧೪॥

**ಇಂತಹ ವಿಚಾರವೇ ಆದರೆ ಎಲ್ಲರೂ ನಿನಗೆ ಏಕೆ ಶರಣಾಗತರಾಗುವುದಿಲ್ಲ ?**

ಆಸುರೀ ಭಾವವನ್ನು ಆಶ್ರಯಿಸುವವರು ಮತ್ತು ಜ್ಞಾನ(ವಿವೇಕ)ವು ಮಾಯೆಯಿಂದ ಆವರಿಸಲ್ಪಟ್ಟಿರುವ ಇಂತಹ ಮನುಷ್ಯರಲ್ಲಿ ಬಹು ನೀಚ ಮತ್ತು ಪಾಪ ಕರ್ಮಮಾಡುವ ಮೂಢ ಮನುಷ್ಯರು ನನಗೆ ಶರಣಾಗುವುದಿಲ್ಲ. ॥೧೫॥

**ಪರಮಾತ್ಮಾ ! ಹಾಗಾದರೆ ನಿನ್ನಲ್ಲಿ ಯಾರು ಶರಣಾಗುವರು ?**

ಎಲೈ ಭರತವಂಶೀಯರಲ್ಲಿ ಶ್ರೇಷ್ಠನಾದ ಅರ್ಜುನ ! ಅರ್ಥಾರ್ಥಿ, ಆರ್ತ, ಜಿಜ್ಞಾಸು ಮತ್ತು ಜ್ಞಾನೀ (ಪ್ರೇಮೀ) - ಈ ನಾಲ್ಕು ಪ್ರಕಾರದ ಸುಕೃತೀ ಭಕ್ತರು ನನ್ನ ಭಜನೆ ಮಾಡುತ್ತಾರೆ ಅರ್ಥಾತ್ ನನಗೆ ಶರಣಾಗುತ್ತಾರೆ. ॥೧೬॥

**ಈ ನಾಲ್ವರಲ್ಲಿ ಶ್ರೇಷ್ಠರು ಯಾರು ?**

ಈ ನಾಲ್ವರು ಭಕ್ತರುಗಳಲ್ಲಿ ಅನನ್ಯ ಭಕ್ತಿಯುಳ್ಳ ಜ್ಞಾನೀ (ಪ್ರೇಮೀ) ಭಕ್ತ ಶ್ರೇಷ್ಠನು ; ಏಕೆಂದರೆ ಆತನು ನಿರಂತರ ನನ್ನಲ್ಲೇ ತೊಡಗಿರುತ್ತಾನೆ. ಆದುದರಿಂದ ನಾನು ಅವನಿಗೂ ಮತ್ತು ಅವನು ನನಗೂ ಅತ್ಯಂತ ಪ್ರಿಯನಾಗಿದ್ದಾನೆ. ॥೧೭॥

**ಬೇರೆ ಭಕ್ತರು ಶ್ರೇಷ್ಠರಲ್ಲವೇನು ?**

ಅವರೆಲ್ಲರೂ ಉದಾರಿಗಳೇ, ಶ್ರೇಷ್ಠರೇ ಆಗಿದ್ದಾರೆ.

**ಮತ್ತೆ ಪ್ರೇಮೀ ಭಕ್ತನಲ್ಲಿ ಏನು ವಿಶೇಷತೆ ಉಂಟಾಯಿತು ?**

ಪ್ರೇಮೀ ಭಕ್ತನಾದರೋ ನನ್ನ ಆತ್ಮ (ಸ್ವರೂಪ)ನೇ ಆಗಿದ್ದಾನೆ - ಎಂಬುದು ನನ್ನ ಅಭಿಪ್ರಾಯ; ಏಕೆಂದರೆ ನನಗಿಂತ ಶ್ರೇಷ್ಠವಾದ ಬೇರೆ ಯಾವ ಗತಿಯೂ ಇಲ್ಲ ಎಂಬುದಾಗಿ ನನ್ನಲ್ಲಿಯೇ ಅವನು ತೊಡಗಿರುತ್ತಾನೆ ಮತ್ತು ನನ್ನಲ್ಲಿಯೇ ಅವನು ದೃಢ ಆಸ್ಥೆಯುಳ್ಳವನು. ಅಂದರೆ ಅರ್ಥಾರ್ಥಿಯಲ್ಲಿ ಧನಾಪೇಕ್ಷೆಯೂ ಇರುತ್ತದೆ. ಆರ್ತನಲ್ಲಿ ದುಃಖಪರಿಹಾರದ ಇಚ್ಛೆಯೂ ಇರುತ್ತದೆ ಮತ್ತು ಜಿಜ್ಞಾಸುವಿನಲ್ಲಿ ತತ್ತ್ವವನ್ನು ತಿಳಿದುಕೊಳ್ಳುವ ಇಚ್ಛೆಯೂ ಇರುತ್ತದೆ. ಆದರೆ ಜ್ಞಾನೀ (ಪ್ರೇಮೀ) ಯಲ್ಲಾದರೋ ಯಾವುದೇ ರೀತಿಯ ಇಚ್ಛೆಯೂ ಇರುವುದಿಲ್ಲ. ॥೧೮॥

**ಜ್ಞಾನೀ ಅರ್ಥಾತ್ ಪ್ರೇಮೀ ಭಕ್ತನ ಮಹಿಮೆ ಇಷ್ಟೊಂದು ಏಕೆ ಇದೆ?**

ಬಹಳ ಜನ್ಮಗಳ ಅಂತಿಮ ಜನ್ಮವಾದ ಈ ಮನುಷ್ಯ ಜನ್ಮದಲ್ಲಿ ನನಗೆ ಶರಣಾಗಿ 'ಸರ್ವಸ್ವವೂ ವಾಸುದೇವ(ಪರಮಾತ್ಮ)'ನೇ ಆಗಿದ್ದಾನೆ, ಎಂಬ ಜ್ಞಾನವುಳ್ಳ ಮಹಾತ್ಮ ಜಗತ್ತಿನಲ್ಲಿ ಅತ್ಯಂತ ದುರ್ಲಭನಾಗಿದ್ದಾನೆ. ॥೧೯॥

**ಅಂತಹ ಪ್ರೇಮೀ ಭಕ್ತನಾಗದೇ ಇರಲು ಕಾರಣವೇನು?**

ಬಗೆ-ಬಗೆಯ ಕಾಮನೆಗಳ ಕಾರಣದಿಂದ 'ಸರ್ವಸ್ವವೂ ವಾಸುದೇವನೇ ಆಗಿದ್ದಾನೆ' ಎಂಬ ಜ್ಞಾನವಿಲ್ಲದವರು ತಮ್ಮ ಸ್ವಭಾವಕ್ಕೆ ಪರವಶರಾದ ಮನುಷ್ಯರು ನನ್ನಲ್ಲಿ ಶರಣಾಗತರಾಗದೆ ಕಾಮನಾ ಪೂರ್ತಿಗಾಗಿ ಅನೇಕ ಉಪಾಯಗಳನ್ನು ಮತ್ತು ನಿಯಮಗಳನ್ನು ಅನುಸರಿಸುತ್ತಾ ಇತರೇ ದೇವತೆಗಳಲ್ಲಿ ಶರಣಾಗತರಾಗುತ್ತಾರೆ ಅರ್ಥಾತ್ ಆ ದೇವತೆಗಳ ಉಪಾಸನೆಯಲ್ಲಿ ನಿರತರಾಗುತ್ತಾರೆ. ॥೨೦॥

**ಅವರನ್ನು ನೀನು ನಿನ್ನ ಕಡೆಗೆ ಏಕೆ ಆಕರ್ಷಿಸಿಕೊಳ್ಳುವುದಿಲ್ಲ?**

ನಾನು ಮನುಷ್ಯರಿಗೆ ಕೊಟ್ಟಿರುವ ಸ್ವಾತಂತ್ರ್ಯವನ್ನು ಕಸಿದುಕೊಳ್ಳುವುದಿಲ್ಲ. ಪ್ರತಿಯಾಗಿ ಯಾವ ಮನುಷ್ಯನು ಶ್ರದ್ಧೆಯಿಂದ ಯಾವ-ಯಾವ ದೇವತೆಗಳ ಪೂಜೆ ಮಾಡುತ್ತಾನೆಯೋ, ಆಯಾಯಾ ದೇವತೆಗಳ ಕುರಿತು ಅವನ ಶ್ರದ್ಧೆಯನ್ನು ನಾನು ದೃಢವಾಗಿಸುತ್ತೇನೆ. ಅವನು ಅದೇ ಶ್ರದ್ಧೆಯಿಂದ ಕೂಡಿಕೊಂಡು ಸಕಾಮಭಾವದಿಂದ ಆ ದೇವತೆಯ ಉಪಾಸನೆ ಮಾಡುತ್ತಾನೆ. ಆದರೆ ಒಂದು ವಿಚಿತ್ರವಾದ ಮಾತೆಂದರೆ ಆ ಉಪಾಸನೆಯಿಂದ ಅವರಿಗೆ ದೊರೆಯುವ ಆ ಫಲವು ನನ್ನಿಂದ ವಿಧಾಯಕವಾಗಿರುವುದೇ ಸಿಕ್ಕುತ್ತದೆ. ಆದರೆ ಸಕಾಮಭಾವನೆಯಿಂದ ದೇವತೆಗಳ ಉಪಾಸನೆ ಮಾಡುವ ಕಾರಣದಿಂದ ಆ ಅಲ್ಪ ಬುದ್ಧಿಯುಳ್ಳ ಮನುಷ್ಯರಿಗೆ ಉತ್ಪತ್ತಿ ಮತ್ತು ನಾಶವುಳ್ಳ, ಅಂತ್ಯವುಳ್ಳ ಫಲವೇ ದೊರೆಯುತ್ತದೆಯೇ ಹೊರತು, ನಾನು ದೊರೆಯುವುದಿಲ್ಲ. ದೇವತೆಗಳ ಪೂಜೆಮಾಡುವವರು ಅತ್ಯಧಿಕ ದೇವತೆಗಳ ಪುನರಾವೃತ್ತಿಶೀಲ ಲೋಕಗಳಿಗೆ ಹೋಗುತ್ತಾರೆ. ಆದರೆ ನನ್ನ ಭಕ್ತರು ನನ್ನನ್ನೇ ಪಡೆಯುತ್ತಾರೆ ॥೨೧-೨೩॥

**ನಿನ್ನ ಭಕ್ತರು ನಿನ್ನನ್ನೇ ಪಡೆಯುತ್ತಾರೆ ಎನ್ನುವಾಗ ಎಲ್ಲರೂ ನಿನ್ನ ಭಕ್ತರೇ ಏಕೆ ಆಗುತ್ತಾ ಇಲ್ಲ?**

ಅಯ್ಯೋ ! ಬುದ್ಧಿಯಿಲ್ಲದ ಮನುಷ್ಯರು ನನ್ನ ಸರ್ವಶ್ರೇಷ್ಠ ಅವಿನಾಶೀ ಪರಮಭಾವವನ್ನು ತಿಳಿಯದೆ ಅವ್ಯಕ್ತ ಪರಮಾತ್ಮನಾದ ನನ್ನನ್ನು ಹುಟ್ಟುವ ಸಾಯುವ ಮನುಷ್ಯನೆಂದೇ ತಿಳಿಯುತ್ತಾರೆ. ಹೀಗಿರುವಾಗ ಅವರು ನನ್ನ ಭಕ್ತರು ಹೇಗೆ ಆಗಬಲ್ಲರು? ॥೨೪॥

**ಅವರು ನಿನ್ನ ಪರಮಭಾವವನ್ನು ತಿಳಿಯದಿದ್ದರೆ ಹೋಗಲಿ, ಆದರೆ ನೀನು ಅವರ ಎದುರಿಗೆ ನಿನ್ನ ನಿಜ ಸ್ವರೂಪವನ್ನು ಏಕೆ ಪ್ರಕಟಿಸುವುದಿಲ್ಲ?**

ಇಲ್ಲವಯ್ಯಾ ! ಮೂಢರು, ನನ್ನನ್ನು ಜನ್ಮರಹಿತ ಮತ್ತು ಅವಿನಾಶೀ ಎಂದು ತಿಳಿಯುವುದಿಲ್ಲ; ಏಕೆಂದರೆ ಯೋಗ ಮಾಯೆಯಿಂದ ಚೆನ್ನಾಗಿ ಆವೃತನಾದ ನಾನು ಅವರ ಮುಂದೆ ನಿಜರೂಪದಿಂದ ಪ್ರಕಟನಾಗುವುದಿಲ್ಲ. ॥೨೫॥

**ಆ ಯೋಗಮಾಯೆಯ ತೆರೆಯು ನಿನ್ನ ಮುಂದೆ ಇರುವುದಿಲ್ಲವೇ?**

ಇಲ್ಲಾ ಅರ್ಜುನಾ ! ನಾನಾದರೋ ಭೂತ, ಭವಿಷ್ಯ ಮತ್ತು ವರ್ತಮಾನ ಕಾಲದಲ್ಲಿ ಇರುವ ಎಲ್ಲಾ ಪ್ರಾಣಿಗಳನ್ನು ಅರಿತಿದ್ದೇನೆ; ಆದರೆ ಮಾಯೆಯಿಂದ ಮೋಹಿತರಾದ ಆ ಜೀವರು ನನ್ನನ್ನು ಅರಿಯಲಾರರು. ॥೨೬॥

**ನಿನ್ನನ್ನು ತಿಳಿಯದೇ ಇರಲು ಮುಖ್ಯ ಕಾರಣವೇನು?**

ಎಲೈ ಭರತವಂಶೀ ಅರ್ಜುನ ! ನನ್ನನ್ನು ತಿಳಿಯದೇ ಇರುವುದಕ್ಕೆ ಮುಖ್ಯ ಕಾರಣವು - ರಾಗ ಮತ್ತು ದ್ವೇಷಗಳಿಂದ ಉಂಟಾದ ದ್ವಂದ್ವ ಮೋಹವಾಗಿದೆ. ಎಲೈ ಪರಂತಪ! ಈ ದ್ವಂದ್ವಮೋಹದಿಂದ ಮೋಹಕ್ಕೊಳಗಾದ ಎಲ್ಲಾ ಪ್ರಾಣಿಗಳೂ ಜಗತ್ತಿನಲ್ಲಿ ಜನನ-ಮರಣಗಳನ್ನು ಪಡೆಯುತ್ತಿರುತ್ತಾರೆ. ॥೨೭॥

**ಹಾಗಾದರೆ ಎಲ್ಲರೂ ದ್ವಂದ್ವಮೋಹದಿಂದ ಮೋಹಕ್ಕೆ ಒಳಗಾಗಿರುತ್ತಾರೆಯೇ ?**

ಇಲ್ಲಾ, ಯಾವ ಪುಣ್ಯಕರ್ಮಿಗಳಾದ ಮನುಷ್ಯರ ಪಾಪಗಳು ನಾಶವಾಗಿ ಹೋಗಿವೆಯೋ, ಅವರು ದ್ವಂದ್ವಮೋಹದಿಂದ ರಹಿತರಾಗುತ್ತಾರೆ ಮತ್ತು ದೃಢವ್ರತರಾಗಿ ನನ್ನ ಧ್ಯಾನದಲ್ಲಿ ನಿರತರಾಗುತ್ತಾರೆ. ॥೨೮॥

**ದೃಢ ವ್ರತರಾಗಿ ನಿನ್ನ ಭಜನೆಯಲ್ಲಿ ತೊಡಗಿದರೆ ಏನಾಗುತ್ತದೆ ?**

ಮುಪ್ಪು - ಸಾವುಗಳಾದಿ ದುಃಖಗಳಿಂದ ಮುಕ್ತಿ ಪಡೆಯುವುದಕ್ಕಾಗಿ ಕೇವಲ ನನ್ನನ್ನೇ ಆಶ್ರಯಿಸಿ ಪ್ರಯತ್ನಿಸುವವರು, ಆ ಬ್ರಹ್ಮವನ್ನು, ಪೂರ್ಣ ಅಧ್ಯಾತ್ಮವನ್ನು ಮತ್ತು ಎಲ್ಲಾ ಕರ್ಮಗಳನ್ನು ತಿಳಿದುಕೊಳ್ಳುತ್ತಾರೆ ಹಾಗೂ ಅವರು ಅಧಿಭೂತ, ಅಧಿದೈವ ಮತ್ತು ಅಧಿಯಜ್ಞಸಹಿತ ನನ್ನನ್ನು ಅರ್ಥಾತ್ ನನ್ನ ಸಮಗ್ರ ರೂಪವನ್ನು ('ಸರ್ವಸ್ವವೂ ವಾಸುದೇವನೇ ಆಗಿದ್ದಾನೆ' - ಎಂಬೀ ರೂಪವನ್ನು) ತಿಳಿದು ಕೊಳ್ಳುತ್ತಾರೆ. ಇಷ್ಟೇ ಅಲ್ಲಾ, ಆ ಅನನ್ಯ ಭಕ್ತರು ಅಂತ್ಯಕಾಲದಲ್ಲಿ ನನ್ನನ್ನೇ ಪಡೆದುಕೊಳ್ಳುತ್ತಾರೆ. ॥೨೯-೩೦॥



# ಎಂಟನೇ ಅಧ್ಯಾಯವು

**ಹೇ ಪುರುಷೋತ್ತಮ ! ಈಗ ನೀನು ತನ್ನ ಆಶ್ರಿತ ಜನರ ಮೂಲಕ ನಿನ್ನ ಬ್ರಹ್ಮ, ಅಧ್ಯಾತ್ಮ ಇತ್ಯಾದಿ ಸಮಗ್ರ ರೂಪವನ್ನು ತಿಳಿಯುವ ಮಾತನ್ನು ಹೇಳಿದೆ ; ಆದುದರಿಂದ ನಾನು - ಕೇಳಲು ಇಚ್ಛಿಸುತ್ತೇನೆ ಆ ಬ್ರಹ್ಮ ಯಾವುದು? - ಎಂದು ಅರ್ಜುನ ಕೇಳಿದನು.**

ಭಗವಂತ ಹೇಳಿದನು - ಆ ಪರಮ ಅಕ್ಷರ ಅರ್ಥಾತ್ ನಿರ್ಗುಣ - ನಿರಾಕಾರ ಪರಮಾತ್ಮನನ್ನು ಬ್ರಹ್ಮ ಎಂದು ಹೇಳುತ್ತಾರೆ.

**ಆ ಅಧ್ಯಾತ್ಮ ಯಾವುದು?**

ಜೀವರುಗಳ ಅಸ್ತಿತ್ವ (ಇರುವಿಕೆ)ವನ್ನು ಅಧ್ಯಾತ್ಮ ಎಂದು ಹೇಳುತ್ತಾರೆ.

**ಆ ಕರ್ಮ ಅಂದರೇನು?**

ಮಹಾಪ್ರಳಯದಲ್ಲಿ ತಮ್ಮ ಕರ್ಮಗಳಸಹಿತ ನನ್ನಲ್ಲಿ ಲೀನಗೊಂಡ ಜೀವರುಗಳನ್ನು ಮಹಾಸರ್ಗ(ಸೃಷ್ಟಿ)ದ ಆದಿಯಲ್ಲಿ ಕರ್ಮಫಲಗಳನ್ನು ಅನುಭವಿಸುವುದಕ್ಕೋಸ್ಕರ ನನ್ನಿಂದ ಪ್ರಕಟಪಡಿಸುವುದು ಅರ್ಥಾತ್ ಶರೀರ ಗಳೊಡನೆ ವಿಶೇಷ ಸಂಬಂಧ ಏರ್ಪಡಿಸುವುದೇ ತ್ಯಾಗರೂಪೀ ಕರ್ಮವಾಗಿದೆ.

**ಪರಮಾತ್ಮಾ ! ಯಾವುದನ್ನು ಅಧಿಭೂತ ಎಂದು ಹೇಳಲಾಗಿದೆ ?**

ಎಲೈ ದೇಹಧಾರಿಗಳಲ್ಲಿ ಶ್ರೇಷ್ಠನಾದ ಅರ್ಜುನ ! ನಾಶವಾಗಿ ಹೋಗುವಂತಹ ಪದಾರ್ಥಗಳು ಅಧಿಭೂತವಾಗಿದೆ.

**ಯಾವುದನ್ನು ಅಧಿದೈವ ಎಂದು ಹೇಳಲಾಗಿದೆ?**

ಸೃಷ್ಟಿಯ ಆರಂಭದಲ್ಲಿ ಎಲ್ಲಕ್ಕಿಂತ ಮೊದಲು ಪ್ರಕಟವಾಗುವ ಹಿರಣ್ಯಗರ್ಭ ಬ್ರಹ್ಮದೇವರೇ ಅಧಿದೈವವಾಗಿದ್ದಾರೆ.

**ಈ ದೇಹದಲ್ಲಿ ಅಧಿಯಜ್ಞ ಯಾರು?**

ಈ ಮನುಷ್ಯ ಶರೀರದಲ್ಲಿ ಅಂತರ್ಯಾಮೀ ರೂಪದಿಂದ ನಾನೇ ಅಧಿ ಯಜ್ಞನಾಗಿದ್ದೇನೆ.

**ಹೇ ಮಧುಸೂದನ ! ವಶಮಾಡಿಕೊಂಡಿರುವ ಅಂತಃಕರಣವುಳ್ಳ ಮನುಷ್ಯರಿಂದ ಅಂತ್ಯಕಾಲದಲ್ಲಿ ನಿನ್ನನ್ನು ಹೇಗೆ ತಿಳಿಯಲಾಗುತ್ತದೆ ?**

ಎಲೈ ಅರ್ಜುನ ! ನಾನು ಮೊದಲು ಅಂತ್ಯಕಾಲದ ವಿಷಯದಲ್ಲಿ ನನ್ನ ನಿಯಮವನ್ನು ಹೇಳುತ್ತೇನೆ. ಅಂತ್ಯಕಾಲದಲ್ಲಿ ನನ್ನ ಸ್ಮರಣೆಮಾಡುತ್ತಾ ಶರೀರವನ್ನು ಬಿಡುವವನು ನನ್ನನ್ನೇ ಸೇರುತ್ತಾನೆ, ಇದರಲ್ಲಿ ಸಂಶಯವೇ ಇಲ್ಲ. ॥೧-೫॥

**ಅಂತ್ಯಕಾಲದಲ್ಲಿ ನಿನ್ನ ಸ್ಮರಣೆ ಮಾಡಿದರೇ ನಿನ್ನ ಪ್ರಾಪ್ತಿಯಾಗುವುದು. ಆದರೆ ನಿನ್ನ ಸ್ಮರಣೆಯನ್ನು ಮಾಡದಿದ್ದರೆ ?**

ಎಲೈ ಕುಂತೀನಂದನ ! ಮನುಷ್ಯನು ಮರಣಕಾಲದಲ್ಲಿ ಯಾವ-ಯಾವ ಭಾವದ ಸ್ಮರಣೆ ಮಾಡುತ್ತಾ ಶರೀರವನ್ನು ಬಿಡುತ್ತಾನೆಯೋ, ಅವನು ಮರಣ ಸಮಯದಲ್ಲಿಯೂ ಅದೇ ಭಾವದಿಂದ ಸದಾ ಭಾವಿತನಾಗಿ ಆ ಭಾವವನ್ನು ಪಡೆದುಕೊಳ್ಳುತ್ತಾನೆ. ॥೬॥

**ಹಾಗಾದರೆ ಅಂತ್ಯಕಾಲದಲ್ಲಿ ನಿನ್ನ ಸ್ಮರಣೆಗಾಗಿ ಏನು ಮಾಡಬೇಕು ?**

ನೀನು ನಿನ್ನ ಮನಸ್ಸು ಮತ್ತು ಬುದ್ಧಿಯನ್ನು ನನ್ನಲ್ಲಿ ಸಮರ್ಪಿಸಿ ಎಲ್ಲಾ ಸಮಯದಲ್ಲಿ ನನ್ನನ್ನೇ ಸ್ಮರಣೆ ಮಾಡು ಮತ್ತು ದೊರತ ಕರ್ತವ್ಯ ಕರ್ಮಗಳನ್ನೂ ಸಹ ಮಾಡು.

**ಇದರಿಂದ ಏನಾಗುವುದು?**

ನೀನು ನಿಃಸಂದೇಹವಾಗಿಯೂ ನನ್ನನ್ನೇ ಹೊಂದುವೆ. ॥೭॥

**ಭಗವಂತಾ ! ನಿನ್ನ ಯಾವ ಸ್ವರೂಪದ ಚಿಂತನೆ ಮಾಡುವುದರಿಂದ ನಿಯತಾತ್ಮನಾದ ಮನುಷ್ಯನು ನಿನ್ನನ್ನು ಹೇಗೆ ಪಡೆದುಕೊಳ್ಳುತ್ತಾನೆ ?**

ನನ್ನ ಸಗುಣ-ನಿರಾಕಾರ, ನಿರ್ಗುಣ-ನಿರಾಕಾರ ಮತ್ತು ಸಗುಣ-ಸಾಕಾರ - ಈ ಮೂರು ಸ್ವರೂಪಗಳಿವೆ. ಇವುಗಳಲ್ಲಿ ಮೊದಲು ನಾನು ಸಗುಣ-ನಿರಾಕಾರದ ಚಿಂತನದಿಂದ ನನ್ನ ಸಾಕ್ಷಾತ್ಕಾರವಾಗುವುದನ್ನು ತಿಳಿಸುತ್ತೇನೆ. ಎಲೈ ಪಾರ್ಥ ! ಅಭ್ಯಾಸ ಯೋಗದಿಂದ ಕೂಡಿ ಅನನ್ಯ ಚಿತ್ತದಿಂದ ಪರಮ ದಿವ್ಯ ಪುರುಷನ ಅರ್ಥಾತ್ ನನ್ನ ಸಗುಣ-ನಿರಾಕಾರ ಸ್ವರೂಪದ ಚಿಂತನೆ ಮಾಡುತ್ತಾ ಶರೀರವನ್ನು ಬಿಡುವವನು ನನ್ನ ಅದೇ ಸ್ವರೂಪವನ್ನು ಪಡೆಯುತ್ತಾನೆ. ॥೮॥

**ಭಗವಂತಾ ! ಆ ಸ್ವರೂಪ ಹೇಗಿದೆ ?**

ಅದು ಸರ್ವಜ್ಞ, ಎಲ್ಲಕ್ಕೂ ಆದಿ. ಎಲ್ಲರ ನಿಯಾಮಕ, ಸೂಕ್ಷ್ಮಾತಿಸೂಕ್ಷ್ಮ ಎಲ್ಲರ ಪಾಲಕ, ಪೋಷಕ, ಅಚಿಂತ್ಯ ಸ್ವರೂಪೀ ಮತ್ತು ಅಜ್ಞಾನ - ಅಂಧಕಾರಗಳಿಂದ ರಹಿತನಾದ ಹಾಗೂ ಸೂರ್ಯನಂತೆ ಪ್ರಕಾಶಸ್ವರೂಪಿಯಾಗಿದೆ. ಅಂತಹ ಸ್ವರೂಪದ ಚಿಂತನೆ ಮಾಡುವ ಆ ಭಕ್ತಿಯಿಂದ ಕೂಡಿದ ಮನುಷ್ಯನು

ಮರಣಸಮಯದಲ್ಲಿ ಯೋಗಬಲದ ಮೂಲಕ ಸ್ಥಿರ ಸ್ಥಾಪಿಸಿಕೊಂಡು ಮನಸ್ಸಿನಿಂದ ತನ್ನ ಪ್ರಾಣಗಳನ್ನು ಹುಬ್ಬುಗಳ ಮಧ್ಯದಲ್ಲಿ ಚೆನ್ನಾಗಿ ಸ್ಥಾಪಿಸಿಕೊಂಡು ಶರೀರವನ್ನು ಬಿಟ್ಟರೆ ಆ ಪರಮ ದಿವ್ಯ ಪುರುಷನನ್ನು ಪಡೆದುಕೊಳ್ಳುತ್ತಾನೆ. ॥೯-೧೦॥

**ನಾನು ನಿನ್ನ ಸಗುಣ - ನಿರಾಕಾರ ಸ್ವರೂಪದ ಚಿಂತನದಿಂದ ನಿನ್ನ ಪ್ರಾಪ್ತಿಯಾಗುವ ವಿಚಾರವನ್ನು ಕೇಳಿದೆನು. ಈಗ ನಿರ್ಗುಣ-ನಿರಾಕಾರದ ಚಿಂತನದಿಂದ ನಿಯತಾತ್ಮನಾದ ಮನುಷ್ಯನು ನಿನ್ನನ್ನು ಹೇಗೆ ಪಡೆಯುತ್ತಾನೆ?**

ವೇದಗಳನ್ನು ಬಲ್ಲ ವಿದ್ವಾಂಸರು ಯಾವುದನ್ನು ಅಕ್ಷರ ಎಂದು ಹೇಳುತ್ತಾರೆಯೋ, ರಾಗ ರಹಿತ ಯತಿಗಳು ಯಾವುದನ್ನು ಪಡೆಯುವ ಇಚ್ಛೆಯಿಂದ ಬ್ರಹ್ಮಚಾರೀ ಜನರು ಬ್ರಹ್ಮಚರ್ಯದ ಪಾಲನೆ ಮಾಡುತ್ತಾರೆಯೋ, ಆ ಪರಮಪದದ ಪ್ರಾಪ್ತಿಯ ವಿಚಾರವನ್ನು ನಾನು ಸಂಕ್ಷೇಪವಾಗಿ ಹೇಳುವೆನು. ಅಂತ್ಯಕಾಲದಲ್ಲಿ ಸಂಪೂರ್ಣ ಇಂದ್ರಿಯಗಳನ್ನು ವಶದಲ್ಲಿಟ್ಟುಕೊಂಡು, ಮನಸ್ಸನ್ನು ಹೃದಯದಲ್ಲಿ ಸ್ಥಾಪಿಸಿಕೊಂಡು ಮತ್ತು ಪ್ರಾಣಗಳನ್ನು ಮಸ್ತಿಷ್ಕದಲ್ಲಿ ಧರಿಸಿಕೊಂಡು, ಯೋಗ-ಧಾರಣೆಯಲ್ಲಿ ಸ್ಥಿತನಾದ ಯಾವ ಸಾಧಕನು 'ಓಂ' ಎಂಬ ಈ ಏಕಾಕ್ಷರ ಬ್ರಹ್ಮವನ್ನು ಉಚ್ಚರಿಸುತ್ತಾ ಮತ್ತು ನನ್ನ ನಿರ್ಗುಣ - ನಿರಾಕಾರ ಸ್ವರೂಪದ ಚಿಂತನೆ ಮಾಡುತ್ತಾ ಶರೀರವನ್ನು ಬಿಡುತ್ತಾನೆಯೋ, ಅವನು ಪರಮಗತಿಯನ್ನು ಪಡೆದುಕೊಳ್ಳುತ್ತಾನೆ. ॥೧೧-೧೩॥

**ನಿರ್ಗುಣ - ನಿರಾಕಾರದ ಚಿಂತನದಿಂದ ನಿನ್ನ ಪ್ರಾಪ್ತಿ ಉಂಟಾಗುತ್ತದೆ; ಈ ಮಾತನ್ನು ನಾನು ಕೇಳಿ ಅರಿತುಕೊಂಡೆನು. ಈಗ ಸಗುಣ-ಸಾಕಾರದ ಚಿಂತನದಿಂದ ನಿಯತಾತ್ಮನಾದ ಮನುಷ್ಯನು ನಿನ್ನನ್ನು ಹೇಗೆ ಪಡೆದುಕೊಳ್ಳುತ್ತಾನೆಂಬುದನ್ನು ತಿಳಿಸು ?**

ಎಲೈ ಪಾರ್ಥ ! ಅನನ್ಯ ಚಿತ್ತವುಳ್ಳ ಯಾವ ಮನುಷ್ಯನು ನಿತ್ಯ-ನಿರಂತರ ನನ್ನ ಚಿಂತನವನ್ನೇ ಮಾಡುತ್ತಾನೆಯೋ, ನನ್ನಲ್ಲಿಯೇ ತಲ್ಲೀನನಾಗಿರುತ್ತಾನೆಯೋ, ಆ ಯೋಗಿಗೆ ನಾನು ಸುಲಭನಾಗಿದ್ದೇನೆ ಅರ್ಥಾತ್ ಅವನಿಗೆ ನಾನು ಸುಲಭವಾಗಿ ದೊರಕುತ್ತೇನೆ. ॥೧೪॥

**ಪರಮಾತ್ಮಾ ! ನಿನ್ನ ಪ್ರಾಪ್ತಿಯಿಂದ ಏನಾಗುತ್ತದೆ?**

ನನ್ನಲ್ಲಿ ಪರಮ ಪ್ರೇಮವುಳ್ಳವರಾಗಿ ನನ್ನನ್ನು ಪಡೆದುಕೊಳ್ಳುವ ಮಹಾತ್ಮರು, ಪ್ರತಿ ಸಮಯದಲ್ಲಿಯೂ ನಾಶವಾಗುವ ಮತ್ತು ದುಃಖಗಳ ಮನೆಯಾಗಿರುವ ಪುನರ್ಜನ್ಮವನ್ನು ಪಡೆಯುವುದಿಲ್ಲ. ॥೧೫॥

**ಹಾಗಾದರೆ ಯಾರಿಗೆ ಪುನರ್ಜನ್ಮ ಉಂಟಾಗುತ್ತದೆ?**

ಎಲೈ ಅರ್ಜುನ ! ಬ್ರಹ್ಮಲೋಕದವರೆಗೆ ಎಲ್ಲಾ ಲೋಕಗಳೂ ಪುನರಾವರ್ತಿಯಾದವುಗಳು. ಆದುದರಿಂದ ಆ ಲೋಕಗಳಿಗೆ ಹೋದ ಮೇಲೆ ಪುನಃ ಹಿಂದಿರುಗಿ ಬರಲೇಬೇಕಾಗುತ್ತದೆ, ಅರ್ಥಾತ್ ಪುನಃ ಹುಟ್ಟಲೇಬೇಕಾಗುತ್ತದೆ. ಆದರೆ ಎಲೈ ಕುಂತೀಪುತ್ರ ! ನನ್ನ ಪ್ರಾಪ್ತಿಯಾದ ಮೇಲೆ ಪುನಃ ಹುಟ್ಟಬೇಕಾಗಿರುವುದಿಲ್ಲ. ॥೧೬॥

**ಆ ಲೋಕಗಳು ಪುನರಾವರ್ತಿ ಏಕಿವೆ?**

ಕಾಲದ ಅವಧಿಗೆ ಒಳಪಟ್ಟಿರುವುದರಿಂದ.

**ಆ ಕಾಲದ ಅವಧಿ ಏನು?**

ಹಗಲು ರಾತ್ರಿಗಳ ತತ್ತ್ವವನ್ನು ತಿಳಿದಿರುವ ಪುರುಷರು ಇದನ್ನು ಬಲ್ಲರು, ಒಂದು ಸಾವಿರ ಚತುರ್ಯುಗ* (ದಿವ್ಯಯುಗ) ಕಳೆದಾಗ ಬ್ರಹ್ಮನ ಒಂದು ಹಗಲು ಮತ್ತು ಒಂದು ಸಾವಿರ ಚತುರ್ಯುಗಗಳ ಅವಧಿ ಗತಿಸಿದಾಗ ಬ್ರಹ್ಮನ ಒಂದು ರಾತ್ರಿಯಾಗುತ್ತದೆ. ಬ್ರಹ್ಮನ ಹಗಲಿನ ಪ್ರಾರಂಭಕಾಲದಲ್ಲಿ (ನಿದ್ರೆಯಿಂದ ಎಚ್ಚರಗೊಂಡಾಗ) ಬ್ರಹ್ಮನ ಸೂಕ್ಷ್ಮ ಶರೀರದಿಂದ ಎಲ್ಲಾ ಪ್ರಾಣಿಗಳೂ ಪ್ರಕಟವಾಗುತ್ತವೆ. ಮತ್ತು ಬ್ರಹ್ಮನ ರಾತ್ರಿಯ ಪ್ರಾರಂಭಕಾಲದಲ್ಲಿ (ಬ್ರಹ್ಮನು ಮಲಗಿಕೊಂಡಾಗ) ಬ್ರಹ್ಮನ ಸೂಕ್ಷ್ಮಶರೀರದಲ್ಲಿ ಸಂಪೂರ್ಣ ಪ್ರಾಣಿಗಳು ಲೀನವಾಗಿ ಹೋಗುತ್ತವೆ. ॥೧೭-೧೮॥

**ಶ್ರೀಕೃಷ್ಣಾ! ಆ ಪ್ರಾಣಿಗಳೆಲ್ಲ ಪದೇ-ಪದೇ ಏಕೆ ಹುಟ್ಟುತ್ತವೆ - ಸಾಯುತ್ತವೆ?**

ಮೊದಲಿನ ಸರ್ಗಗಳಲ್ಲಿದ್ದ ಪ್ರಾಣಿಗಳ ಸಮುದಾಯವು ಅದೇ ಇರುತ್ತದೆ. ಆದರೆ ಕೇವಲ ತನ್ನ ರಾಗ-ದ್ವೇಷಾದಿ ಸ್ವಭಾವಕ್ಕೆ ಪರವಶನಾಗಿ ಅದೇ ಪ್ರಾಣಿ ಸಮುದಾಯವು ಪದೇ ಪದೇ ಬ್ರಹ್ಮನ ಹಗಲಿನ ಸಮಯದಲ್ಲಿ ಉತ್ಪತ್ತಿಯಾಗುತ್ತಾ ಇರುತ್ತದೆ ಮತ್ತು ಬ್ರಹ್ಮನ ರಾತ್ರಿ ಸಮಯದಲ್ಲಿ ಲೀನವಾಗುತ್ತಾ ಇರುತ್ತದೆ. ॥೧೯॥

**ಆ ಅವ್ಯಕ್ತ (ಬ್ರಹ್ಮ ಸೂಕ್ಷ್ಮಶರೀರ)ಕ್ಕಿಂತಲೂ ಸಹ ಎಂದೆಂದಿಗೂ ವಿನಶವಾಗದಿರುವಂತಹ ಶ್ರೇಷ್ಠವಾದುದು ಬೇರೆ ಯಾವುದಾದರೂ ಇದೆಯೋ?**

ಹೌದು, ಆ ಬ್ರಹ್ಮನಿಗಿಂತಲೂ ಸಹ ಶ್ರೇಷ್ಠವಾದ ಒಬ್ಬ ನಿತ್ಯ-ನಿರಂತರ ಇರುವಂತಹ ಭಾವರೂಪೀ ಅವ್ಯಕ್ತ ಪರಮಾತ್ಮನಿದ್ದಾನೆ, ಆತನು ಸಂಪೂರ್ಣವಾಗಿ ಪ್ರಾಣಿಗಳು ನಾಶವಾಗಿ ಹೋದಮೇಲೆಯೂ ಸಹ ನಾಶವಾಗುವುದಿಲ್ಲ. ಆತನನ್ನೇ ಅವ್ಯಕ್ತ, ಅಕ್ಷರ ಮತ್ತು ಪರಮಗತಿ ಎಂದು ಹೇಳುತ್ತಾರೆ ಹಾಗೂ ಆತನ

* ನಲವತ್ತೂರು ಲಕ್ಷ ಇಪ್ಪತ್ತು ಸಾವಿರ ವರ್ಷಗಳಿಗೆ ಒಂದು ಚತುರ್ಯುಗ.

ಪ್ರಾಪ್ತಿಯಾದ ಮೇಲೆ ಜೀವನು ಪುನಃ ಹಿಂದಿರುಗಿ ಜಗತ್ತಿನಲ್ಲಿ ಹುಟ್ಟುವುದಿಲ್ಲ; ಅದೇ ನನ್ನ ಪರಮಧಾಮ (ಸ್ವರೂಪ)ವಾಗಿದೆ. ॥೨೦-೨೧॥

**ಆ ಪರಮಧಾಮದ ಪ್ರಾಪ್ತಿ ಹೇಗೆ ಆಗುತ್ತದೆ?**

ಹೇ ಪಾರ್ಥ ! ಯಾರ ಅಂತರ್ಗತವಾಗಿ ಇಡೀ ಜಗತ್ತು ಇದೆಯೋ ಮತ್ತು ಯಾರಿಂದ ಇಡೀ ವಿಶ್ವವೆಲ್ಲಾ ವ್ಯಾಪಿಸಿದೆಯೋ, ಆ ಪರಮ ಪುರುಷ ಪರಮಾತ್ಮನು ಅನನ್ಯ ಭಕ್ತಿಯಿಂದ ಪ್ರಾಪ್ತನಾಗುತ್ತಾನೆ. ॥೨೨॥

**ಅನ್ಯ (ಜಗತ್ತಿ)ನ ಸಂಬಂಧ ಇಟ್ಟುಕೊಳ್ಳದೇ ಇರುವುದರಿಂದ ಮತ್ತು ಅನನ್ಯ ಸಂಬಂಧವಿಟ್ಟುಕೊಳ್ಳುವುದರಿಂದ ಏನಾಗುತ್ತದೆ?**

ಎಲೈ ಅರ್ಜುನ ! ಜಗತ್ತಿನ ಸಂಬಂಧ ಇಟ್ಟುಕೊಳ್ಳದ ಪ್ರಾಣಿ ಯಾವ ಮಾರ್ಗದಲ್ಲಿ ಹೋದರೆ ಪುನಃ ಹಿಂದಿರುಗಿ ಜಗತ್ತಿಗೆ ಬರುವುದಿಲ್ಲವೋ ಮತ್ತು ಯಾವ ಮಾರ್ಗದಲ್ಲಿ ಹೋದ ಸಾಂಸಾರಿಕ ಸಂಬಂಧ ಇಟ್ಟುಕೊಳ್ಳುವ ಪ್ರಾಣಿ ಪುನಃ ಹಿಂದಿರುಗಿ ಈ ಪ್ರಪಂಚಕ್ಕೆ ಬರುತ್ತಾರೋ; ಆ ಎರಡು ಮಾರ್ಗಗಳನ್ನು ನಾನು ಹೇಳುವೆನು. ॥೨೩॥

**ಪರಮಾತ್ಮಾ ! ಆ ಎರಡು ಮಾರ್ಗಗಳು ಯಾವುವು?**

ಯಾವ ಮಾರ್ಗದಲ್ಲಿ ಪ್ರಕಾಶಸ್ವರೂಪೀ ಅಗ್ನಿ, ಹಗಲು, ಶುಕ್ಲಪಕ್ಷ ಮತ್ತು ಆರು ತಿಂಗಳುಗಳುಳ್ಳ ಉತ್ತರಾಯಣದ ಅಧಿಪತಿ ದೇವತೆಗಳಿದ್ದಾರೆಯೋ, ಆ ಮಾರ್ಗದಲ್ಲಿ ಶರೀರ ಬಿಟ್ಟುಹೋದ ಬ್ರಹ್ಮಜ್ಞಾನಿಗಳು ಪರಬ್ರಹ್ಮನನ್ನು ಪಡೆಯುತ್ತಾರೆ ಅರ್ಥಾತ್ ಪುನಃ ಹಿಂದಿರುಗಿ ಬರುವುದಿಲ್ಲ (ಹುಟ್ಟುವುದಿಲ್ಲ). ಅಲ್ಲದೆ ಯಾವ ಮಾರ್ಗದಲ್ಲಿ ಅಂಧಕಾರ, ರಾತ್ರಿ, ಕೃಷ್ಣಪಕ್ಷ ಮತ್ತು ಆರು ತಿಂಗಳುಳ್ಳ ದಕ್ಷಿಣಾಯನದ ಅಧಿಪತಿ ದೇವತೆಗಳಿದ್ದಾರೆಯೋ, ಮರಣಹೊಂದಿ ಆ ಮಾರ್ಗದಲ್ಲಿ ಹೋದ ಸಕಾಮ ಮನುಷ್ಯರು ಸ್ವರ್ಗಾದಿ ಶ್ರೇಷ್ಠ ಲೋಕಗಳ ಸುಖವನ್ನು ಅನುಭವಿಸಿ ನಂತರ ಪುನಃ ಹಿಂದಿರುಗಿ ಬರುತ್ತಾರೆ ಅರ್ಥಾತ್ ಪುನರ್ಜನ್ಮ ಪಡೆಯುತ್ತಾರೆ. ॥೨೪-೨೫॥

**ಈ ಎರಡು ಮಾರ್ಗಗಳು ಯಾವಾಗಿನಿಂದ ಪ್ರಾರಂಭವಾಗಿದೆ?**

ಜೀವರುಗಳ ಈ ಶುಕ್ಲ ಮತ್ತು ಕೃಷ್ಣ ಎರಡು ಮಾರ್ಗಗಳೂ ಅನಾದಿಯಾಗಿವೆ. ಇವುಗಳಲ್ಲಿ ಶುಕ್ಲ ಮಾರ್ಗದಲ್ಲಿ ಹೋದವರು ಹಿಂದಿರುಗಿ ಬರಬೇಕಾಗುವುದಿಲ್ಲ ಮತ್ತು ಕೃಷ್ಣಮಾರ್ಗದಲ್ಲಿ ಹೋದವರು ಹಿಂದಿರುಗಿ ಬರಬೇಕಾಗುತ್ತದೆ. ॥೨೬॥

**ಶ್ರೀಕೃಷ್ಣ ! ಹಿಂದಿರುಗಿ ಬರದಂತಿರಬೇಕಾದರೆ ಏನು ಮಾಡಬೇಕು?**

ಎಲೈ ಪಾರ್ಥ ! ಈ ಎರಡು ಮಾರ್ಗಗಳ ಪರಿಣಾಮವನ್ನು ತಿಳಿದುಕೊಂಡ ಯಾರೇ ಯೋಗಿಯೂ ಸಂಸಾರದ ಮೋಹಕ್ಕೆ ಒಳಗಾಗುವುದಿಲ್ಲ. ಆದುದರಿಂದ ಎಲೈ ಅರ್ಜುನ ! ನೀನು ಎಲ್ಲಾ ಸಮಯದಲ್ಲಿಯೂ ಯೋಗದಿಂದ ಕೂಡಿರು ಅರ್ಥಾತ್ ಸಂಸಾರದಿಂದ ಯಾವಾಗಲೂ ನಿರ್ಲಿಪ್ತ ನಿರ್ವಿಕಾರನಾಗಿರು. ॥೨೭॥

**ಪರಮಾತ್ಮ ! ಯೋಗಿಯಾಗುವುದರಿಂದ ಏನಾಗುವುದು?**

ವೇದದಲ್ಲಿ, ಯಜ್ಞದಲ್ಲಿ, ತಪಸ್ಸಿನಲ್ಲಿ ಹಾಗೂ ದಾನದಲ್ಲಿ ಯಾವ-ಯಾವ ಪುಣ್ಯಫಲಗಳನ್ನು ಹೇಳಿವೆಯೋ, ಯೋಗಿಯು ಆ ಎಲ್ಲಾ ಪುಣ್ಯಫಲಗಳನ್ನೂ ಅತಿಕ್ರಮಣಮಾಡಿ (ಮೀರಿ) ಆದಿಸ್ಥಾನವಾದ ಪರಮಾತ್ಮನನ್ನು ಪಡೆದುಕೊಂಡು ಬಿಡುತ್ತಾನೆ. ॥೨೮॥



# ಒಂಭತ್ತನೇ ಅಧ್ಯಾಯವು

**ಹೇ ಶ್ರೀಕೃಷ್ಣ ! ನಾನು ಮಧ್ಯದಲ್ಲಿಯೇ ಪ್ರಶ್ನೆಮಾಡಿದುದರಿಂದ ನೀನು ಹೇಳಿದ ಮಾತುಗಳನ್ನು ನಾನು ಕೇಳಿಸಿಕೊಂಡೆನು. ನಾನು ಪ್ರಶ್ನಿಸುವುದಕ್ಕಿಂತ ಮೊದಲು ನೀನು ಇನ್ನೇನನ್ನೂ ಹೇಳಬೇಕೆಂದು ಇಚ್ಛಿಸುತ್ತಿದ್ದೇ?**

ಭಗವಂತ ಹೇಳಿದ - ಅಯ್ಯಾ ! ನಾನು ಮೊದಲು ವಿಜ್ಞಾನ ಸಹಿತ ಜ್ಞಾನದ ಮಾತನ್ನು ಹೇಳುತ್ತಿದ್ದೆನು. ಅದೇ ಅತ್ಯಂತ ಗೋಪ್ಯವಾದ ವಿಜ್ಞಾನ ಸಹಿತ ಜ್ಞಾನವನ್ನು ದೋಷದೃಷ್ಟಿಯಿಲ್ಲದ ನಿನಗೋಸ್ಕರ ನಾನು ಪುನಃ ಹೇಳುವೆನು, ಅದನ್ನು ತಿಳಿದುಕೊಂಡು ನೀನು ಜನನ-ಮರಣರೂಪೀ ಸಂಸಾರದಿಂದ ಮುಕ್ತನಾಗಿ ಹೋಗುವೆ. ॥೧॥

**ಆ ವಿಜ್ಞಾನಸಹಿತ ಜ್ಞಾನವಾದರೋ ಬಹಳ ಕಠಿನವಾಗಿರಬಹುದು?**

ಇಲ್ಲವಪ್ಪಾ ! ಆ ವಿಜ್ಞಾನಸಹಿತ ಜ್ಞಾನವು ಎಲ್ಲಾ ವಿದ್ಯೆಗಳ ರಾಜ, ಗೋಪ್ಯವಾದವುಗಳೆಲ್ಲಕ್ಕೂ ರಾಜ, ಅತ್ಯಂತ ಪವಿತ್ರ, ಅತ್ಯುತ್ತಮ, ಪ್ರತ್ಯಕ್ಷ ಫಲಕಾರಿ, ಧರ್ಮಮಯ ಮತ್ತು ಅವಿನಾಶೀ ಹಾಗೂ ಮಾಡಲು (ಸಾಧಿಸಲು) ಬಹಳ ಸುಗಮವಾಗಿದೆ. ॥೨॥

**ಇಂತಹ ಸುಲಭವಾದ ವಿದ್ಯೆಯನ್ನು ಎಲ್ಲರೂ ಏಕೆ ಪಡೆದುಕೊಳ್ಳುವುದಿಲ್ಲ?**

ಎಲೈ ಪರಂತಪ ! ಮನುಷ್ಯರು ಈ ಜ್ಞಾನ-ವಿಜ್ಞಾನ ರೂಪೀ ಧರ್ಮದಲ್ಲಿ ಶ್ರದ್ಧೆಯಿಡುವುದಿಲ್ಲ ಮತ್ತು ವಿಶ್ವಾಸವನ್ನೂ ಮಾಡುವುದಿಲ್ಲ, ಆದುದರಿಂದ ಅವರು ನನ್ನನ್ನು ಪಡೆದುಕೊಳ್ಳದೆ, ಮೃತ್ಯುರೂಪೀ ಸಂಸಾರ ಚಕ್ರದ ಮಾರ್ಗದಲ್ಲಿ ಹಿಂದಿರುಗುತ್ತಾ ಇರುತ್ತಾರೆ ಅರ್ಥಾತ್ ಪದೇ ಪದೇ ಹುಟ್ಟುತ್ತಾ-ಸಾಯುತ್ತಾ ಇರುತ್ತಾರೆ. ॥೩॥

**ಪರಮಾತ್ಮಾ! ಆ ಜ್ಞಾನ - ವಿಜ್ಞಾನ ರೂಪೀ ಧರ್ಮ (ವಿದ್ಯೆ) ಅಂದರೇನು?**

ನಾನು ಅವ್ಯಕ್ತರೂಪದಿಂದ ಎಲ್ಲಾ ಪ್ರಾಣಿಗಳಲ್ಲಿಯೂ ಇದ್ದೇನೆ ಮತ್ತು ಎಲ್ಲಾ ಪ್ರಾಣಿಗಳೂ ನನ್ನಲ್ಲಿವೆ ಹಾಗೂ ನಾನು ಸಂಪೂರ್ಣ ಪ್ರಾಣಿಗಳಲ್ಲಿ ಇಲ್ಲ ಮತ್ತು ಸಂಪೂರ್ಣ ಪ್ರಾಣಿಗಳು ನನ್ನಲ್ಲಿಲ್ಲ; ಅರ್ಥಾತ್ ಎಲ್ಲ ಪ್ರಾಣಿಗಳ ಸ್ವತಂತ್ರ ಅಸ್ತಿತ್ವವು ತಿಳಿಯಲಾಗುತ್ತದೋ ಅಲ್ಲಿಯಾದರೋ ನಾನು ಎಲ್ಲಾ ಪ್ರಾಣಿಗಳಲ್ಲಿಯೂ ಇರುತ್ತೇನೆ ಮತ್ತು ಎಲ್ಲಾ ಪ್ರಾಣಿಗಳೂ ನನ್ನಲ್ಲಿರುತ್ತವೆ. ಆದರೆ ಪ್ರಾಣಿಗಳ ಸ್ವತಂತ್ರ

ಅಸ್ತಿತ್ವವಿಲ್ಲವೆಂದು ಭಾವಿಸುವೆಡೆಗಳಲ್ಲಿ ನಾನು ಪ್ರಾಣಿಗಳಲ್ಲಿ ಇರುವುದಿಲ್ಲ ಮತ್ತು ಪ್ರಾಣಿಗಳು ನನ್ನಲ್ಲಿರುವುದಿಲ್ಲ. ಆದರೆ ಸರ್ವಸ್ವವೂ ನಾನಾಗಿರುತ್ತೇನೆ.

**ಆದರೆ ಈ ಜಗತ್ತಿನ ಉತ್ಪಾದಕ ಮತ್ತು ಆಧಾರ ಯಾರಾದರೂ ಇದ್ದೇ ಇರಬೇಕಲ್ಲವೇ?**

ಅಯ್ಯಾ ! ಇರುವುದೇನೋ ನಾನೇ; ಆದರೆ ನನ್ನ ಸ್ವರೂಪವು ಸಂಪೂರ್ಣ ಪ್ರಾಣಿಗಳನ್ನೂ ಉತ್ಪತ್ತಿ ಮಾಡುವಂತಹುದು, ಎಲ್ಲವನ್ನು ಧರಿಸಿರುವಂತದ್ದು ಮತ್ತು ಅವುಗಳ ಪಾಲನೆ - ಪೋಷಣೆ ಮಾಡುವಂತಹುದಾಗಿರುತ್ತಿದ್ದರೂ ಸಹ ಆ ಪ್ರಾಣಿಗಳಲ್ಲಿ ಸ್ಥಿತವಾಗಿಲ್ಲ, ಅವುಗಳಿಂದ ಸಂಪೂರ್ಣವಾಗಿ ನಿರ್ಲಿಪ್ತವಾಗಿದೆ - ನನ್ನ ಈ ಈಶ್ವರ ಸಂಬಂಧೀ ಯೋಗ (ಸಾಮರ್ಥ್ಯ)ವನ್ನು ತಿಳಿದುಕೊ. ॥೪-೫॥

**ಹಾಗಾದರೆ ಆ ಪ್ರಾಣಿಗಳು ನಿನ್ನಲ್ಲಿ ಯಾವ ಪ್ರಕಾರ ಇರುತ್ತವೆ?**

ಎಲ್ಲಾ ಕಡೆಗಳಲ್ಲಿಯೂ ಸಂಚರಿಸುವ ಮಹಾನ್ ವಾಯುವು ನಿರಂತರ ಆಕಾಶದಲ್ಲಿಯೇ ಇರುತ್ತಿರುವಂತೆ, ಎಲ್ಲಾ ಪ್ರಾಣಿಗಳೂ ನನ್ನಲ್ಲಿಯೇ ಇರುತ್ತವೆ ಎಂದು ತಿಳಿದುಕೊ ॥೬॥

**ಹಾಗಾದರೆ ಆ ಪ್ರಾಣಿಗಳು ಮುಕ್ತವಾಗಿ ಹೋಗಬಹುದು?**

ಇಲ್ಲಾ, ಕುಂತೀನಂದನ ! ಪ್ರಕೃತಿಯೊಡನೆ ಸಂಬಂಧ ಇಟ್ಟುಕೊಳ್ಳುವ ಆ ಪ್ರಾಣಿಗಳು ಮಹಾ ಪ್ರಳಯದಲ್ಲಿ ನನ್ನ ಪ್ರಕೃತಿಯಲ್ಲಿ ಲೀನವಾಗಿ ಹೋಗುತ್ತವೆ ಮತ್ತು ಮಹಾಸರ್ಗದ ಪ್ರಾರಂಭದಲ್ಲಿ ನಾನು ಪುನಃ ಅವುಗಳನ್ನು ರಚಿಸುತ್ತೇನೆ. ॥೭॥

**ನೀನು ಅವುಗಳ ರಚನೆಯನ್ನು ಎಲ್ಲಿಯವರೆಗೆ ಮಾಡುತ್ತಿರುವೆ?**

ಅವು ತಮ್ಮ ಪ್ರಕೃತಿಗೆ (ಸ್ವಭಾವಕ್ಕೆ) ಪರವಶವಾಗಿರುವವರೆಗೂ ನಾನು ನನ್ನ ಪ್ರಕೃತಿಯನ್ನು ವಶಮಾಡಿಕೊಂಡು ಅವುಗಳನ್ನು ಪದೇ-ಪದೇ ರಚನೆಮಾಡುತ್ತಾ ಇರುತ್ತೇನೆ. ॥೮॥

**ಪರಮಾತ್ಮಾ! ನೀನು ಪದೇ ಪದೇ ಅವುಗಳ ರಚನೆ ಮಾಡುತ್ತಾ ಇರುವಾಗ ಅವುಗಳ ರಚನಾರೂಪೀ ಕರ್ಮಗಳೊಡನೆ ನಿನ್ನ ಸಂಬಂಧ ಇರುತ್ತಿರಬಹುದು?**

ಇಲ್ಲ ಧನಂಜಯ ! ನಾನು ಆ ಕರ್ಮಗಳಲ್ಲಿ ಆಸಕ್ತಿಯಿಲ್ಲದವನೂ ಹಾಗೂ ಉದಾಸೀನನಂತೆಯೂ ಸರ್ವಥಾ ನಿರ್ಲಿಪ್ತನಾಗಿರುತ್ತೇನೆ. ಆದುದರಿಂದ ಆ ಕರ್ಮಗಳು ನನ್ನನ್ನು ಬಂಧಿಸುವುದಿಲ್ಲ. ॥೯॥

**ಹಾಗಾದರೆ ನೀನು ಸೃಷ್ಟಿಯ ರಚನೆಯನ್ನು ಯಾವ ರೀತಿ ಮಾಡುವೆ?**

ವಾಸ್ತವವಾಗಿ ಪ್ರಕೃತಿಯೇ ನನ್ನ ಅಧ್ಯಕ್ಷತೆಯಲ್ಲಿ ಅರ್ಥಾತ್ ನನ್ನಿಂದ (ಅಧಿಕಾರ) - ಸ್ಫೂರ್ತಿ ಪಡೆದು ಸಂಪೂರ್ಣವಾಗಿ ಚರ-ಅಚರ ಪ್ರಾಣಿಗಳ ರಚನೆ ಮಾಡುತ್ತದೆ. ಹೇ ಕೌಂತೇಯ ! ನನ್ನ ಅಧ್ಯಕ್ಷತೆಯ ಕಾರಣದಿಂದಲೇ ಜಗತ್ತಿನಲ್ಲಿ ವಿವಿಧ ಪರಿವರ್ತನೆ ನಡೆಯುತ್ತಾ ಇರುತ್ತದೆ. ॥೧೦॥

**ನಿನ್ನ ಶಕ್ತಿಯಿಂದಲೇ ಪ್ರಪಂಚದಲ್ಲಿ ಸರ್ವವೂ ನಡೆಯುತ್ತಿದೆ, ಆದಾಗ್ಯೂ ಸಹ ಎಲ್ಲರೂ ನಿನ್ನಲ್ಲಿ ಶ್ರದ್ಧೆಯನ್ನೇಕೆ ಇಡುವುದಿಲ್ಲ?**

ಮೂಢಜನರು ಎಲ್ಲಾ ಪ್ರಾಣಿಗಳ ನನ್ನ ಮಹಾನ್ ಈಶ್ವರರೂಪೀ ಪರಮಭಾವವನ್ನು ಅರಿಯದೆ ನನ್ನನ್ನು ಸಾಧಾರಣ ಮಾನವನೆಂದು ತಿಳಿದುಕೊಂಡು ನನ್ನ ಅವಹೇಳನ ಮಾಡುತ್ತಾರೆ. ॥೧೧॥

**ಆ ಮೂಢಜನರು ಯಾವ ರೀತಿಯಾಗಿರುತ್ತಾರೆ ಭಗವಂತ?**

ಆ ಮೂಢಜನರು ಆಸುರೀ, ರಾಕ್ಷಸೀ ಮತ್ತು ಮೋಹಿನೀ ಪ್ರಕೃತಿಯ ಆಶ್ರಯ ಪಡೆಯುವವರಾಗಿದ್ದಾರೆ ಮತ್ತು ಅವರ ಎಲ್ಲ ಆಶೆಗಳು, ಶುಭಕರ್ಮಗಳು ಮತ್ತು ಎಲ್ಲ ಜ್ಞಾನವು ವ್ಯರ್ಥವಾಗುತ್ತವೆ ಅರ್ಥಾತ್ ಸತ್ಫಲ ಕೊಡುವಂತಹವುಗಳಾಗುವುದಿಲ್ಲ. ॥೧೨॥

**ಪರಮಾತ್ಮಾ ! ನಿನ್ನಲ್ಲಿ ಯಾರು ಶ್ರದ್ಧೆಯನ್ನಿಡುತ್ತಾರೆ?**

ಎಲೈ ಪೃಥಾನಂದನ ! ನನ್ನನ್ನು ಕೇವಲ ಪ್ರಾಣಿಗಳ ಆದಿ ಮತ್ತು ಅವಿನಾಶಿಯೆಂದು ಭಾವಿಸುವ ಮಹಾತ್ಮರು ನನ್ನ ದೈವೀ ಸಂಪತ್ತಿನ ಆಶ್ರಯಪಡೆದುಕೊಂಡು ಅನನ್ಯ ಭಾವದಿಂದ ನನ್ನನ್ನು ಭಜಿಸುತ್ತಾರೆ. ॥೧೩॥

**ನಿನ್ನನ್ನು ಭಜಿಸುವವರ ಲಕ್ಷಣಗಳೇನು?**

ನಿರಂತರ ನನ್ನಲ್ಲಿ ತೊಡಗಿರುವ ಆ ದೃಢವ್ರತರಾದ ಮನುಷ್ಯರು ಭಕ್ತಿಯಿಂದ ನನ್ನ ನಾಮ ಸಂಕೀರ್ತನೆ ಮಾಡುತ್ತಾರೆ, ನನ್ನ ಪ್ರಾಪ್ತಿಗಾಗಿ ಪ್ರಯತ್ನ (ಪ್ರೀತಿಯಿಂದ ಸಾಧನೆ) ಮಾಡುತ್ತಾರೆ ಮತ್ತು ನನಗೆ ನಮಸ್ಕಾರ ಮಾಡುತ್ತಾ ನನ್ನ ಉಪಾಸನೆ ಮಾಡುತ್ತಾರೆ. ॥೧೪॥

**ಭಗವಂತ ! ನಿನ್ನ ಉಪಾಸನೆ ಮಾಡುವವರ ಬೇರೆ ಯಾವುದಾದರೂ ಪ್ರಕಾರವಿದೆಯೇ?**

ಹೌದು, ಇದೆ. ಅನೇಕ ಸಾಧಕರು ಜ್ಞಾನಯಜ್ಞದ ಮೂಲಕ ಅಭಿನ್ನಭಾವದಿಂದ ನನ್ನ ಪೂಜೆಯನ್ನು ಮಾಡುತ್ತ ನನ್ನ ಉಪಾಸನೆ ಮಾಡುತ್ತಾರೆ ಮತ್ತು ಇನ್ನಿತರೇ

ಅನೇಕ ಮಂದಿ ಸಾಧಕರು ತಮ್ಮನ್ನು ಬೇರೆಯೆಂದು ತಿಳಿದುಕೊಂಡು ಹಾಗೂ ವಿಶ್ವವನ್ನು ನನ್ನ ಸ್ವರೂಪವೆಂದು ತಿಳಿದುಕೊಂಡು (ಸೇವ್ಯ - ಸೇವಕಭಾವದಿಂದ) ಅನೇಕ ಪ್ರಕಾರಗಳಿಂದ ನನ್ನ ಉಪಾಸನೆ ಮಾಡುತ್ತಾರೆ. ॥೧೫॥

**ವಿಶ್ವದ ಉಪಾಸನೆಯು ನಿನ್ನ ಉಪಾಸನೆ ಹೇಗಾಯಿತು, ಪರಮಾತ್ಮಾ?**

ನಾನೇ ಕ್ರತು (ಶ್ರೌತಕರ್ಮ), ಯಜ್ಞ, ಸ್ವಧಾ, ಔಷಧ, ಮಂತ್ರ, ಘೃತ, ಅಗ್ನಿ ಮತ್ತು ಹವನರೂಪೀ ಕ್ರಿಯೆಯಾಗಿದ್ದೇನೆ. ನಾನೇ ತಿಳಿಯಲು ಯೋಗ್ಯವಾದ ವಿಧಿ, ಪವಿತ್ರತೆ, ಓಂಕಾರ, ಋಗ್ವೇದ, ಸಾಮವೇದ ಮತ್ತು ಯಜುರ್ವೇದವೂ ಆಗಿದ್ದೇನೆ. ಈ ಇಡೀ ಜಗತ್ತಿನ ಪಿತಾ, ಧಾತಾ, ಮಾತಾ, ಪಿತಾಮಹ, ಗತಿ, ಭರ್ತಾ, ಪ್ರಭು ಸಾಕ್ಷಿ, ನಿವಾಸ, ಆಶ್ರಯ, ಸಹೃದಯೀ, ಉತ್ಪತ್ತಿ, ಪ್ರಳಯ, ಸ್ಥಾನ, ನಿಧಾನ* ಮತ್ತು ಅವಿನಾಶೀ ಬೀಜವೂ ಸಹ ನಾನೇ ಆಗಿರುತ್ತೇನೆ. ಎಲೈ ಅರ್ಜುನ! ನಾನೇ ಸೂರ್ಯನ ರೂಪದಿಂದ ಬೆಳಗುತ್ತೇನೆ, ನೀರನ್ನು ಆಕರ್ಷಿಸುತ್ತೇನೆ ಮತ್ತು ಪುನಃ ಆ ನೀರನ್ನು ಮಳೆಯ ರೂಪದಿಂದ ಸುರಿಸುತ್ತೇನೆ. ನಾನೇ ಅಮೃತ ಮತ್ತು ಮೃತ್ಯು; ಇನ್ನೇನು ಹೇಳಲಿ, ಸತ್ ಮತ್ತು ಅಸತ್ (ಜಡ-ಚೇತನ) ಸಹ ನಾನೇ ಆಗಿರುತ್ತೇನೆ. ॥೧೬-೧೯॥

**ವಿಶ್ವರೂಪದಿಂದ ಸರ್ವಸ್ವವೂ ನೀನೇ ಆಗಿರುವಾಗ ನಿನ್ನನ್ನು ಬಿಟ್ಟು ಮನುಷ್ಯರು ದೇವತೆಗಳ ಉಪಾಸನೆಯನ್ನು ಏಕೆ ಮಾಡುತ್ತಾರೆ?**

ಸುಖ ಭೋಗಗಳ ಇಚ್ಛೆಯುಳ್ಳ ಮನುಷ್ಯರು ಮೂರು ವೇದಗಳಲ್ಲಿ ಹೇಳಿರುವ ಯಜ್ಞಾದಿ ಶುಭಕರ್ಮಗಳ ಅನುಷ್ಠಾನದ ಮೂಲಕ ಇಂದ್ರನನ್ನು ಆರಾಧಿಸುತ್ತಾ ಸ್ವರ್ಗಪ್ರಾಪ್ತಿಗಾಗಿ ಬೇಡುತ್ತಾರೆ. ಸೋಮರಸವನ್ನು ಪಾನಮಾಡುವ ಮತ್ತು ಸ್ವರ್ಗಕ್ಕೆ ಪ್ರತಿಬಂಧಕವಾದ ಪಾಪರಹಿತರಾದ ಆ ಮನುಷ್ಯರು ಪುಣ್ಯಬಲದಿಂದ ವಿಶಾಲವಾದ ಸ್ವರ್ಗಲೋಕಕ್ಕೆ ಹೋಗುತ್ತಾರೆ, ಅಲ್ಲಿ ದೇವತೆಗಳ ದಿವ್ಯ ಭೋಗಗಳನ್ನು ಭೋಗಿಸಿ ಪುಣ್ಯ ಕ್ಷೀಣವಾದ ಕೂಡಲೇ ಪುನಃ ಮೃತ್ಯುಲೋಕಕ್ಕೆ ಬಂದು ಬಿಡುತ್ತಾರೆ. ಈ ರೀತಿ ಮೂರು ವೇದಗಳಲ್ಲಿ ಹೇಳಿರುವ ಸಕಾಮ ಅನುಷ್ಠಾನಗಳ ಆಶ್ರಯ ಪಡೆಯುವ ಮತ್ತು ಸುಖಭೋಗಗಳನ್ನು ಇಚ್ಛಿಸುವ ಮನುಷ್ಯರು ಪದೇ ಪದೇ ಹುಟ್ಟುತ್ತಾ ಮತ್ತು ಸಾಯುತ್ತಾ ಇರುತ್ತಾರೆ. ॥೨೦-೨೧॥

*ಪ್ರಳಯ ಕಾಲದಲ್ಲಿ ಎಲ್ಲಾ ಜೀವಿಗಳೂ ಸೂಕ್ಷ್ಮರೂಪದಿಂದ ಯಾವುದರಲ್ಲಿ ಲಯವಾಗಿ ಹೋಗುತ್ತವೆಯೋ ಅದರ ಹೆಸರೇ ನಿಧಾನ.

**ಫಲಾಪೇಕ್ಷೆಯಿಂದ ಅನುಷ್ಠಾನವನ್ನು ಆಶ್ರಯಿಸುವವರಿಗೆ ಈ ಸ್ಥಿತಿ ಉಂಟಾಗುತ್ತದೆ. ಆದರೆ ಯಾರಾದರೂ ನಿನ್ನ ಆಶ್ರಯವನ್ನು ಪಡೆದುಕೊಂಡರೆ?**

ಯಾರು ಅನನ್ಯ ಮನಸ್ಕರಾಗಿ ನನ್ನ ಚಿಂತನೆಯನ್ನೇ ಮಾಡುತ್ತಾ ನನ್ನ ಉಪಾಸನೆ ಮಾಡುತ್ತಾರೆಯೋ, ನನ್ನಲ್ಲಿಯೇ ನಿರಂತರ ತಲ್ಲೀನನಾಗಿರುವ ಆ ಭಕ್ತರ ಯೋಗ ಕ್ಷೇಮವನ್ನು ನಾನು ಸ್ವತಃ ವಹಿಸಿಕೊಳ್ಳುತ್ತೇನೆ, ಅರ್ಥಾತ್ ದೊರೆಯಲು ಅಸಾಧ್ಯವಾದುದನ್ನು ದೊರಕಿಸುವ ಮತ್ತು ದೊರೆತುದನ್ನು ರಕ್ಷಣೆಮಾಡುವ ಕೆಲಸವನ್ನು ನಾನು ಸ್ವತಃ ಮಾಡುತ್ತೇನೆ. ॥೨೨॥

**ಆದರೆ ನಿನ್ನ ಉಪಾಸನೆಯನ್ನು ಮಾಡದೆ ಯಾರಾದರೂ ಶ್ರದ್ಧೆಯಿಂದ ಅನ್ಯ ದೇವತೆಗಳ ಉಪಾಸನೆ ಮಾಡಿದರೆ?**

ಎಲೈ ಕುಂತೀನಂದನ ! ಶ್ರದ್ಧೆಯಿಂದ ಅನ್ಯ ದೇವತೆಗಳ ಆರಾಧನೆ (ಉಪಾಸನೆ) ಮಾಡುವ ಆ ಮನುಷ್ಯರೂ ಸಹ ವಾಸ್ತವವಾಗಿ ('ಸತ್ - ಅಸತ್ ಸರ್ವವೂ ನಾನೇ ಆಗಿದ್ದೇನೆ - ಈ ದೃಷ್ಟಿಯಿಂದ) ನನ್ನ ಉಪಾಸನೆಯನ್ನೇ ಮಾಡುತ್ತಾರೆ. ಆದರೆ ಅವರಿಂದ ಆಚರಿಸಲಾದ ಆ ಪೂಜೆಯು ವಿಧಿಪೂರ್ವಕವಾಗಿರುವುದಿಲ್ಲ. ॥೨೩॥

**ಆ ಪೂಜೆಯೂ ಸಹ ನಿನ್ನದೇ ಆಗಿರುವಾಗ, ಅವರ ಆ ಪೂಜೆಯು ಏಕೆ ವಿಧಿ ಪೂರ್ವಕವಲ್ಲ ? ಪರಮಾತ್ಮ !**

ಯಜ್ಞ, ದಾನ, ತಪಸ್ಸು ಇತ್ಯಾದಿ ಎಲ್ಲಾ ಶುಭಕರ್ಮಗಳನ್ನು ಸ್ವೀಕರಿಸುವವನು ಮತ್ತು ಇಡೀ ಜಗತ್ತಿನ ಒಡೆಯನು ನಾನೇ ಆಗಿದ್ದೇನೆ; ಆದರೆ ಅವರು ನನ್ನನ್ನು ಈ ತತ್ತ್ವದಿಂದ ತಿಳಿಯರು. ಆದುದರಿಂದ ಅವರ ಪತನ ಉಂಟಾಗಿ ಹೋಗುತ್ತದೆ. ॥೨೪॥

**ಅವರ ಆ ಪತನ ಎಂದರೇನು?**

ದೇವತೆಗಳ ಭಕ್ತರು ದೇವತೆಗಳನ್ನು, ಪಿತೃಗಳ ಭಕ್ತರು ಪಿತೃಗಳನ್ನು ಮತ್ತು ಭೂತ-ಪ್ರೇತಗಳ ಭಕ್ತರು ಭೂತ-ಪ್ರೇತಗಳನ್ನು ಪಡೆಯುತ್ತಾರೆ; ನನ್ನ ಭಕ್ತರಾದರೋ ನನ್ನನ್ನೇ ಪಡೆಯುತ್ತಾರೆ. ॥೨೫॥

**ಯಾವ ಭಕ್ತಿಯಿಂದ ನಿನ್ನ ಭಕ್ತರು ನಿನ್ನನ್ನೇ ಪಡೆಯುತ್ತಾರೆಯೋ, ಆ ಭಕ್ತಿಯು ಬಹಳ ಕಠಿಣವಾಗಿರಬಹುದು?**

ಇಲ್ಲಾ, ಅದು ಬಹು ಸುಗಮವಾಗಿದೆ. ಯಾವ ಭಕ್ತನು ಪ್ರೀತಿಯಿಂದ ನನಗೆ ಪತ್ರ, ಪುಷ್ಪ, ಫಲ, ಜಲ ಇತ್ಯಾದಿಗಳನ್ನು ಅರ್ಪಿಸುತ್ತಾನೆಯೋ, ಆ ನನ್ನಲ್ಲಿ ತಲ್ಲೀನನಾದ ಭಕ್ತನಿಂದ ಭಕ್ತಿಪೂರ್ವಕ ಅರ್ಪಿಸಲ್ಪಟ್ಟ ಉಪಹಾರವನ್ನು ನಾನು ಸ್ವತಃ ತಿನ್ನುತ್ತೇನೆ. ॥೨೬॥

**ನಾನು ಏನು ಮಾಡಬೇಕು?**

ಹೇ ಕುಂತೀಪುತ್ರ ! ನೀನು ಏನನ್ನು ತಿನ್ನುವೆಯೋ, ಯಾವ ಯಜ್ಞ ಮಾಡುವಿಯೋ, ಏನನ್ನು ದಾನ ಮಾಡುವಿಯೋ ಏನು ತಪಸ್ಸು ಮಾಡುವಿಯೋ, ಇದಲ್ಲದೆ ಏನೆಲ್ಲ ಮಾಡುವಿಯೋ ಅದೆಲ್ಲವನ್ನೂ ಸಹ ನನಗೆ ಅರ್ಪಿಸಿಬಿಡು. ॥೨೭॥

**ಪರಮಾತ್ಮಾ ! ಅರ್ಪಣೆ ಮಾಡುವುದರಿಂದ ಏನಾಗುವುದು?**

ಅಯ್ಯಾ ! ನೀನು ಬಂಧನಕಾರಕವಾದ ಎಲ್ಲಾ ಶುಭ-ಅಶುಭ ಕರ್ಮಗಳ ಫಲದಿಂದ ಮುಕ್ತನಾಗಿ ನನ್ನನ್ನೇ ಸೇರಿಕೊಳ್ಳುವೆ. ॥೨೮॥

**ಯಾರು ಸರ್ವಸ್ವವನ್ನೂ ನಿನಗೆ ಸಮರ್ಪಿಸಿಬಿಡುವನೋ, ಅವನನ್ನೇನೋ ನೀನು ಬಂಧನದಿಂದ ಮುಕ್ತಗೊಳಿಸಿಬಿಡುವೆ ಮತ್ತು ಯಾರು ಸರ್ವಸ್ವವನ್ನು ನಿನಗೆ ಅರ್ಪಿಸುವುದಿಲ್ಲವೋ, ಅವನು ಬಂಧನದಲ್ಲಿಯೇ ಇರುವುದೇ ! ನಿನ್ನಲ್ಲಿ ಇಷ್ಟು ಪಕ್ಷಪಾತವೇಕೆ?**

ಇದು ಪಕ್ಷಪಾತವಲ್ಲಪ್ಪಾ ! ನಾನಾದರೋ ಸಕಲ ಪ್ರಾಣಿಗಳಲ್ಲಿ ಸಮಾನವಾಗಿದ್ದೇನೆ. ನನಗೆ ಯಾರೂ ದ್ವೇಷಿಯಿಲ್ಲ ಮತ್ತು ಯಾರೂ ಪ್ರಿಯರೂ ಅಲ್ಲ. ಆದರೆ ಯಾರು ಪ್ರೀತಿಪೂರ್ವಕ ನನ್ನನ್ನು ಭಜಿಸುತ್ತಾರೋ ಅವರು ನನ್ನಲ್ಲಿ ಮತ್ತು ನಾನು ಅವರಲ್ಲಿ ವಿಶೇಷತೆಯಿಂದ ಇರುತ್ತೇನೆ. ॥೨೯॥

**ಯಾವ ಮನುಷ್ಯನಾದರೂ ದುರಾಚಾರಿಯಾಗಿದ್ದರೆ, ಅವನೂ ಸಹ ನಿನ್ನನ್ನು ಭಜಿಸಬಹುದೇ? ನಿನ್ನ ಭಕ್ತನಾಗಬಲ್ಲನೇ?**

ಹೌದು, ಖಂಡಿತ ಆಗಬಲ್ಲನು. ಅತ್ಯಂತ ದುರಾಚಾರಿಯಾದ ಮನುಷ್ಯನೂ ಸಹ ಇತರರ ಆಶ್ರಯವನ್ನು ಬಿಟ್ಟು ನನ್ನನ್ನು ಭಜಿಸುತ್ತಿರುವುದಾದರೆ ಅವನನ್ನು ಸಾಧುವೆಂದೇ ಭಾವಿಸಬೇಕು; ಏಕೆಂದರೆ ಅವನು ಬಹಳ ಚೆನ್ನಾಗಿ ನಿಶ್ಚಯ ಮಾಡಿಕೊಂಡಿದ್ದಾನೆ. ॥೩೦॥

**ಅವನನ್ನು ಕೇವಲ ಸಾಧುವೆಂದೇ ಭಾವಿಸಿಕೊಳ್ಳುವುದೇ?**

ಇಲ್ಲಾ, ಅವನು ಕೂಡಲೇ ಧರ್ಮಾತ್ಮಾ (ಮಹಾನ್ ಪವಿತ್ರ) ಆಗಿಬಿಡುತ್ತಾನೆ. ಮತ್ತು ಶಾಶ್ವತವಾಗಿರುವ ಶಾಂತಿಯನ್ನು ಪಡೆಯುತ್ತಾನೆ. ಎಲೈ ಕುಂತೀನಂದನ ! 'ನನ್ನ ಭಕ್ತನು ಎಂದಿಗೂ ಪತನವಾಗುವುದಿಲ್ಲ' ಇದು ನನ್ನ ಪ್ರತಿಜ್ಞೆಯಾಗಿದೆ. ಇದನ್ನು ನೀನು ದೃಢವಾಗಿ ನಿಶ್ಚಯ ಮಾಡಿಕೋ. ॥೩೧॥

**ಇನ್ನೂ ಯಾರಾದರೂ ಸಹ ನಿನ್ನ ಭಕ್ತಿಗೆ ಅಧಿಕಾರಿಯಾಗಬಲ್ಲರೇ?**

ಹೌದು ಪಾರ್ಥ ! ಪಾಪಯೋನಿಜರು ಹಾಗೂ ಸ್ತ್ರೀಯರು, ವೈಶ್ಯ ಮತ್ತು

ಶೂದ್ರರೂ ಸಹ ನನ್ನನ್ನು ಆಶ್ರಯಿಸಿ ನನ್ನನ್ನೇ ಸೇರುತ್ತಾರೆ. ಅಂದಮೇಲೆ ಜನ್ಮ ಮತ್ತು ಕರ್ಮಗಳಿಂದ ಪವಿತ್ರರಾದ ಬ್ರಾಹ್ಮಣ ಮತ್ತು ಕ್ಷತ್ರಿಯರು ನನ್ನ ಭಕ್ತರಾಗುವುದರಲ್ಲಿ ಹೇಳುವುದಾದರೂ ಏನಿದೆ?

**ಶ್ರೀಕೃಷ್ಣ! ನಾನು ಅಂತಹ ಭಕ್ತ ಹೇಗೆ ಆಗುವೆನು?**

ಈ ನಾಶವಾಗುವ ಮತ್ತು ಸುಖವಿಲ್ಲದ ಶರೀರವನ್ನು ಪಡೆದು ನೀನು ನನ್ನನ್ನು ಭಜಿಸು. ॥೩೨-೩೩॥

**ನಾನು ನಿನ್ನನ್ನು ಹೇಗೆ ಭಜಿಸಲಿ?**

ನೀನು ಸ್ವತಃ ನನ್ನ ಭಕ್ತನೇ ಆಗಿಬಿಡು, ನನ್ನಲ್ಲಿಯೇ ಮನಸ್ಸುಳ್ಳವನಾಗು, ನನ್ನನ್ನೇ ಆರಾಧಿಸುವವನಾಗು ಮತ್ತು ನನಗೇ ನಮಸ್ಕಾರ ಮಾಡು. ಈ ರೀತಿ ನನ್ನೊಡನೆ ನಿನ್ನನ್ನು ನೀನೇ ತೊಡಗಿಸಿಕೊಂಡು ನನ್ನ ಪರಾಯಣನಾಗಿ ನೀನು ನನ್ನನ್ನೇ ಪಡೆದುಕೊಳ್ಳುವೆ. ॥೩೪॥



# ಹತ್ತನೇ ಅಧ್ಯಾಯವು

ಭಗವಂತ ಹೇಳಿದನು - ಅಯ್ಯಾ ! ನೀನು ಪುನಃ ನನ್ನ ಪರಮ ವಚನವನ್ನು* ಕೇಳು, ಅದನ್ನು ನಾನು ನಿನ್ನ ಹಿತದ ದೃಷ್ಟಿಯಿಂದ ಹೇಳುವೆನು, ಏಕೆಂದರೆ ಎಲೈ ಮಹಾಬಾಹು ! ನೀನು ನನ್ನಲ್ಲಿ ಅತ್ಯಂತ ಪ್ರೇಮವನ್ನಿಟ್ಟಿರುವೆ.

**ಪರಮಾತ್ಮಾ ! ಆ ಪರಮ ವಚನವೇನು?**

ಈ ವಿಶ್ವವನ್ನೆಲ್ಲಾ ನಾನೇ ಪ್ರಕಟಿಸಿರುವೆನು, ಎಂಬೀ ಮಾತನ್ನು ಪೂರ್ಣವಾಗಿ ದೇವತೆಗಳೂ ಅರಿಯರು ಮತ್ತು ಮಹರ್ಷಿಗಳೂ ಸಹ ತಿಳಿಯರು. ಏಕೆಂದರೆ ನಾನು ಎಲ್ಲಾ ಪ್ರಕಾರದಿಂದಲೂ ದೇವತೆಗಳಿಗೂ ಮತ್ತು ಮಹರ್ಷಿಗಳಿಗೂ ಆದಿಯಾಗಿದ್ದೇನೆ. ॥೧-೨॥

**ಎಲ್ಲರ ಮೂಲಕಾರಣನಾದ ನಿನ್ನನ್ನೂ ದೇವತೆಗಳು ಮತ್ತು ಮಹರ್ಷಿಗಳೂ ಸಹ ತಿಳಿಯರು, ಹೀಗಿರುವಾಗ ಮನುಷ್ಯನು ನಿನ್ನನ್ನು ಹೇಗೆ ತಿಳಿಯುವನು ಮತ್ತು ಅವನ ಉದ್ಧಾರ ಹೇಗೆ ಆಗುವುದು?**

ಯಾವ ಮನುಷ್ಯನು ನನ್ನನ್ನು ಅಜನ್ಮ, ಅವಿನಾಶಿ ಮತ್ತು ಸಂಪೂರ್ಣ ಲೋಕಗಳ ಮಹಾನ್ ಒಡೆಯನೆಂದು ತಿಳಿಯುತ್ತಾನೆಯೋ ಅರ್ಥಾತ್ ದೃಢವಾಗಿ ಭಾವಿಸುತ್ತಾನೋ ಅವನು ಮನುಷ್ಯರಲ್ಲಿ ಜ್ಞಾನಿ ಮತ್ತು ಅವರು ಎಲ್ಲಾ ಪಾಪಗಳಿಂದ ಮುಕ್ತನಾಗುತ್ತಾನೆ. ॥೩॥

**ಭಗವಂತಾ ! ನಿನ್ನ ಆ ಪರಮ ವಚನವನ್ನು ನಾನು ಹೇಗೆ ತಿಳಿದುಕೊಳ್ಳಲಿ?**

ಬುದ್ಧಿ, ಜ್ಞಾನ, ಮೋಹಶೂನ್ಯತೆ, ಕ್ಷಮೆ, ಸತ್ಯ, ಇಂದ್ರಿಯಗಳ ನಿಗ್ರಹ, ಮನಸ್ಸು ವಶವರ್ತಿಯಾಗಿರುವುದು, ಸುಖ, ದುಃಖ ಉತ್ಪತ್ತಿಯಾಗುವುದು, ಪ್ರಳಯವಾಗುವುದು, ಭಯ, ಅಭಯ, ಅಹಿಂಸೆ, ಸಮತೆ, ಸಂತೋಷ, ತಪಸ್ಸು, ದಾನ, ಯಶಸ್ಸು ಮತ್ತು ಅಪಯಶಸ್ಸು - ಪ್ರಾಣಿಗಳ ಈ ಅನೇಕ ಪ್ರಕಾರದ ಬೇರೆ-ಬೇರೆ ಭಾವಗಳು ನನ್ನಿಂದಲೇ ಉತ್ಪತ್ತಿಯಾಗುತ್ತವೆ. ಕೇವಲ ಈ ಭಾವಗಳೇ ಅಲ್ಲ, ನನ್ನಲ್ಲಿ ಶ್ರದ್ಧಾ-ಭಕ್ತಿಯನ್ನಿಟ್ಟಿರುವ ಈ ಜಗತ್ತಿನಲ್ಲಿ ಯಾರ ಸಂಪೂರ್ಣ ಪ್ರಜೆ ಇದೆಯೋ ಆ ಏಳು ಮಂದಿ ಮಹರ್ಷಿಗಳೂ ಮತ್ತು ಅವರಿಗಿಂತಲೂ ಸಹ ಮೊದಲಿಗರಾದ ನಾಲ್ವರು ಸನಕಾದಿಗಳು ಹಾಗೂ ಹದಿನಾಲ್ಕು ಮಂದಿ ಮನುಗಳೂ

---

* ಎಲ್ಲರ ಮೂಲದಲ್ಲಿ ತಾನೇ ತನ್ನನ್ನು ತಿಳಿಸುವುದೇ ಭಗವಂತನ ಪರಮ ವಚನವಾಗಿದೆ.

ಸಹ ನನ್ನ ಮನಸ್ಸಿನಿಂದ ಹುಟ್ಟಿರುತ್ತಾರೆ ಅರ್ಥಾತ್ ಅವರೆಲ್ಲರ ಉತ್ಪಾದಕ ಮತ್ತು ಶಿಕ್ಷಕ ನಾನೇ ಆಗಿರುತ್ತೇನೆ. ॥೪-೬॥

**ಬುದ್ಧಿ, ಜ್ಞಾನ ಇತ್ಯಾದಿ ಮತ್ತು ಮಹರ್ಷಿ ಮುಂತಾದವರು ನನ್ನಿಂದಲೇ ಉತ್ಪತ್ತಿಯಾಗುತ್ತಾರೆ - ಎಂದು ಹೇಳುವುದರಲ್ಲಿ ನಿನ್ನ ಅಭಿಪ್ರಾಯವೇನು?**

ಯಾರು ನನ್ನ ಈ ವಿಭೂತಿ ಮತ್ತು ಯೋಗವನ್ನು* ಶ್ರದ್ಧೆಯಿಂದ ದೃಢವಾಗಿ ನಂಬುತ್ತಾನೆಯೋ, ಅವನಿಗೆ ನನ್ನಲ್ಲಿ ಅವಿಚಲ ಭಕ್ತಿಯುಂಟಾಗುತ್ತದೆ, ಇದರಲ್ಲಿ ಯಾವ ಸಂದೇಹವೂ ಇಲ್ಲ. ॥೭॥

**ಆ ದೃಢವಾಗಿ ನಂಬುವುದೆಂದರೇನು?**

ನಾನು ಜಗತ್ತಿನ ಮೂಲ ಕಾರಣನಾಗಿದ್ದೇನೆ ಮತ್ತು ನನ್ನಿಂದಲೇ ಇಡೀ ಜಗತ್ತು ಚೇಷ್ಟಿತವಾಗಿದೆ - ಎಂಬುದಾಗಿ ನನ್ನನ್ನು ದೃಢತೆಯಿಂದ ತಿಳಿದುಕೊಂಡು ನನ್ನಲ್ಲಿಯೇ ಶ್ರದ್ಧಾ ಪ್ರೇಮಗಳನ್ನಿಡುತ್ತಾ ಬುದ್ಧಿವಂತರಾದ ಭಕ್ತರು ನನ್ನನ್ನೇ ಭಜಿಸುತ್ತಾರೆ. ॥೮॥

**ದೇವಾ ! ಅವರ ಭಜನದ ರೀತಿ ಯಾವುದು?**

ನನ್ನಲ್ಲಿ ಮನಸ್ಸುಳ್ಳ, ನನ್ನಲ್ಲಿಯೇ ಪ್ರಾಣವನ್ನು ಅರ್ಪಿಸಿರುವ ಭಕ್ತರು, ನನ್ನ ಗುಣ, ಪ್ರಭಾವ ಮುಂತಾದುವನ್ನು ಪರಸ್ಪರ ಹೇಳುತ್ತಾ ಕೇಳುತ್ತಾ ಮತ್ತು ಅವುಗಳ ಚರ್ಚೆ ಮಾಡುತ್ತಾ ನಿತ್ಯ ನಿರಂತರ ಸಂತುಷ್ಟರಾಗಿರುತ್ತಾರೆ ಮತ್ತು ನನ್ನಲ್ಲಿಯೇ ಪ್ರೀತಿಯಿಡುತ್ತಾರೆ. ॥೯॥

**ಅಂತಹ ಭಕ್ತರಿಗಾಗಿ ನೀನು ಏನು ಮಾಡುವೆ?**

ನಿತ್ಯ ನಿರಂತರ ನನ್ನಲ್ಲಿಯೇ ಮಗ್ನರಾಗಿರುವ ಮತ್ತು ಪ್ರೀತಿಪೂರ್ವಕ ನನ್ನನ್ನು ಭಜಿಸುವಂತಹ ಭಕ್ತರಿಗೆ ನಾನೇ ನನ್ನ ಪರವಾಗಿ ಆ ಬುದ್ಧಿಯೋಗ (ಸಮತೆ)ವನ್ನು ಕೊಡುತ್ತೇನೆ; ಅದರಿಂದ ಅವರು ನನ್ನನ್ನೇ ಪಡೆದುಕೊಳ್ಳುತ್ತಾರೆ. ॥೧೦॥

**ಇದಲ್ಲದೆ ನೀನು ಮತ್ತಿನ್ನೇನಾದರೂ ಮಾಡುವೆಯಾ?**

ಹೌದು, ಆ ಭಕ್ತರ ಮೇಲೆ ಕೃಪೆಮಾಡುವುದಕ್ಕಾಗಿ ಅವರ ಸ್ವರೂಪದಲ್ಲಿ ಸ್ಥಿತನಾದ ನಾನು ಅಜ್ಞಾನಜನ್ಯ ಅವರ ಅಂಧಕಾರವನ್ನು ಪ್ರಕಾಶಮಾನವಾದ ಜ್ಞಾನ-ದೀಪದ ಮೂಲಕ ಪೂರ್ಣವಾಗಿ ನಾಶಮಾಡಿ ಬಿಡುತ್ತೇನೆ. ॥೧೧॥

ಅರ್ಜುನ ಹೇಳಿದನು - ಹೇ ಪರಮಾತ್ಮಾ ! ಭಕ್ತರ ಮೇಲಿರುವ ನಿನ್ನ

*ಭಗವಂತನ ಸಾಮರ್ಥ್ಯದ ಹೆಸರೇ ಯೋಗವಾಗಿದೆ ಮತ್ತು ಈ ಯೋಗದಿಂದ ಪ್ರಕಟವಾಗುವ ಎಷ್ಟು ಐಶ್ವರ್ಯವಿದೆಯೋ, ಅದರ ಹೆಸರೇ ವಿಭೂತಿಯಾಗಿದೆ.

ಅಲೌಕಿಕ, ಅದ್ಭುತ ಕೃಪೆಯ ಮಾತನ್ನು ಕೇಳಿ ನಾನು ಗದ್ಗದಿತನಾಗುತ್ತಿದ್ದೇನೆ. ಹೇ ಪ್ರಭು ! ನಿರ್ಗುಣ-ನಿರಾಕಾರ ಬ್ರಹ್ಮ, ಎಲ್ಲರ ಪರಮಧಾಮ ಮತ್ತು ಮಹಾನ್ ಪವಿತ್ರ ನೀನೇ ಆಗಿರುವೆ. ನೀನು ಶಾಶ್ವತ, ದಿವ್ಯ ಪುರುಷ, ಆದಿದೇವ, ಅಜನ್ಮಾ ಮತ್ತು ವಿಭು (ವ್ಯಾಪಕ)ವಾಗಿರುವೆ - ಎಂಬುದಾಗಿ ಎಲ್ಲಾ ಋಷಿಗಳೂ, ದೇವರ್ಷಿನಾರದ, ಅಸಿತ, ದೇವಲ ಹಾಗೂ ವ್ಯಾಸರು ಹೇಳುತ್ತಾರೆ ಮತ್ತು ಸ್ವತಃ ನೀನೂ ಸಹ ನನ್ನೊಡನೆ ಹೇಳುತ್ತಿರುವೆ. ॥೧೨-೧೩॥

**ನಾನು ಹೇಳುತ್ತಿರುವುದರಲ್ಲಿ ನಿನಗೆ ನಂಬಿಕೆಯಿದೆಯೋ ಅರ್ಜುನ?**

ಹೌದು ಕೇಶವ, ನೀನು ನನ್ನೊಡನೆ ಹೇಳುತ್ತಿರುವದೆಲ್ಲವನ್ನೂ ನಾನು ಸತ್ಯವೆಂದೇ ತಿಳಿಯುತ್ತೇನೆ. ಹೇ ದೇವಾದಿದೇವ ! ನೀನು ಪ್ರಕಟವಾಗುವುದನ್ನು ದಿವ್ಯ ಶಕ್ತಿಯುಳ್ಳ ದೇವತೆಗಳು ಅರಿಯರು ಮತ್ತು ವಿಚಿತ್ರ ಮಾಯಾಶಕ್ತಿಯುಳ್ಳ ದಾನವರೂ ಕೂಡಾ ತಿಳಿಯರು. ॥೧೪॥

**ದೇವತೆಗಳಿಗೂ ಸಹ ತಿಳಿಯದಿದ್ದರೆ ಮತ್ತೆ ಯಾರು ತಿಳಿದುಕೊಳ್ಳುತ್ತಾರೆ?**

ಹೇ ಭೂತಭಾವನ ! ಹೇ ಭೂತೇಶ ! ಹೇ ದೇವದೇವ ! ಹೇ ಜಗತ್ಪತೇ ! ಹೇ ಪುರುಷೋತ್ತಮ ! ನೀನೇ ಸ್ವತಃ ನಿನ್ನಿಂದ ನೀನೆ ನಿನ್ನನ್ನು ತಿಳಿಯುತ್ತೀಯ. ಆದುದರಿಂದ ನೀನು ಯಾವ ವಿಭೂತಿಗಳಿಂದ ಇಡೀ ವಿಶ್ವವನ್ನು ವ್ಯಾಪಿಸಿಕೊಂಡಿರುವೆಯೋ, ಆ ನಿನ್ನ ಎಲ್ಲಾ ದಿವ್ಯ ವಿಭೂತಿಗಳನ್ನು ಸಂಪೂರ್ಣವಾಗಿ ಹೇಳಲು ನೀನೇ ಸಮರ್ಥನಾಗಿರುವೆ. ॥೧೫-೧೬॥

**ವಿಭೂತಿಗಳನ್ನು ಕೇಳಿ ಏನು ಮಾಡುವೆ?**

ಹೇ ಯೋಗೇಶ್ವರ ! ಪ್ರತಿಕ್ಷಣವೂ ಸಾಂಗೋಪಾಂಗವಾಗಿ ಚಿಂತನೆ ಮಾಡುತ್ತಾ ನಾನು ನಿನ್ನನ್ನು ಹೇಗೆ ತಿಳಿದುಕೊಳ್ಳಲಿ? ಹೇ ಪರಮಾತ್ಮಾ ! ಯಾವ ಯಾವ ಭಾವಗಳಲ್ಲಿ ನಾನು ನಿನ್ನ ಚಿಂತನೆ ಮಾಡಲಿ? ಆದುದರಿಂದ ಹೇ ಜನಾರ್ದನ ! ನೀನು ನಿನ್ನ ವಿಭೂತಿ ಮತ್ತು ಯೋಗವನ್ನು ವಿಸ್ತಾರವಾಗಿ ಪುನಃ ಹೇಳು ; ಏಕೆಂದರೆ ನಿನ್ನ ಅಮೃತಮಯ ವಚನಗಳನ್ನು ಕೇಳಿ ನನಗೆ ತೃಪ್ತಿಯೇ ಆಗುತ್ತಾ ಇಲ್ಲ . ॥೧೭-೧೮॥

ಭಗವಂತ ಹೇಳಿದನು - ಸರಿಯಾಗಿದೆ. ನಾನು ನನ್ನ ದಿವ್ಯ ವಿಭೂತಿಗಳನ್ನು ನಿನಗೋಸ್ಕರ ಸಂಕ್ಷೇಪವಾಗಿ ಹೇಳುವೆನು ; ಏಕೆಂದರೆ ಎಲೈ ಕುರುಶ್ರೇಷ್ಠ ! ನನ್ನ ವಿಭೂತಿಗಳ ವಿಸ್ತಾರಕ್ಕೆ ಅಂತ್ಯವೇ ಇಲ್ಲ. ॥೧೯॥

**ಶ್ರೀಕೃಷ್ಣ! ನಿನ್ನ ಆ ದಿವ್ಯ ವಿಭೂತಿಗಳು ಯಾವವು?**

ಎಲೈ ಗುಡಾಕೇಶ! ಸಕಲ ಪ್ರಾಣಿಗಳ ಆದಿ, ಮಧ್ಯ ಹಾಗೂ ಅಂತ್ಯದಲ್ಲಿಯೂ ನಾನೇ ಇದ್ದೇನೆ ; ಪ್ರಾಣಿಗಳ ಅಂತಃಕರಣದಲ್ಲಿ ಆತ್ಮರೂಪದಿಂದಲೂ ನಾನೇ ಸ್ಥಿತನಾಗಿದ್ದೇನೆ. ಅದಿತಿಯ ಪುತ್ರರಲ್ಲಿ ವಿಷ್ಣು (ವಾಮನ) ಮತ್ತು ಪ್ರಕಾಶಮಯ ವಸ್ತುಗಳಲ್ಲಿ ಕಿರಣಗಳುಳ್ಳ ಸೂರ್ಯನು ನಾನೇ ಆಗಿದ್ದೇನೆ. ಮರುತರ ತೇಜಸ್ಸು ಮತ್ತು ನಕ್ಷತ್ರಗಳ ಅಧಿಪತಿ ಚಂದ್ರನು ನಾನೇ. ವೇದಗಳಲ್ಲಿ ಸಾಮವೇದ, ದೇವತೆಗಳಲ್ಲಿ ಇಂದ್ರ, ಇಂದ್ರಿಯಗಳಲ್ಲಿ ಮನಸ್ಸು ಮತ್ತು ಪ್ರಾಣಿಗಳ ಚೇತನ (ಪ್ರಾಣ ಶಕ್ತಿ) ನಾನೇ ಆಗಿದ್ದೇನೆ. ರುದ್ರರಲ್ಲಿ ಶಂಕರ, ಯಕ್ಷರಾಕ್ಷಸರಲ್ಲಿ ಕುಬೇರ, ವಸುಗಳಲ್ಲಿ ಅಗ್ನಿ ಮತ್ತು ಶಿಖರವುಳ್ಳ ಪರ್ವತಗಳಲ್ಲಿ ಮೇರು ನಾನಾಗಿದ್ದೇನೆ. ಹೇ ಪಾರ್ಥ ! ಪುರೋಹಿತರುಗಳಲ್ಲಿ ಮುಖ್ಯರಾದ ಬೃಹಸ್ಪತಿಯನ್ನು ನನ್ನ ಸ್ವರೂಪ ಎಂದು ತಿಳಿದುಕೊ.

**ಇನ್ನೂ ನಿನ್ನ ಯಾವ ಯಾವ ವಿಭೂತಿಗಳಿವೆ?**

ಸೇನಾಪತಿಗಳಲ್ಲಿ ಸ್ಕಂದ ಮತ್ತು ಜಲಾಶಯಗಳಲ್ಲಿ ಸಮುದ್ರ ನಾನು. ಮಹರ್ಷಿಗಳಲ್ಲಿ ಭೃಗು, ಶಬ್ದಗಳಲ್ಲಿ ಏಕಾಕ್ಷರ (ಪ್ರಣವ ಅರ್ಥಾತ್ 'ಓಂ' ), ಯಜ್ಞಗಳಲ್ಲೆಲ್ಲಾ ಜಪಯಜ್ಞ ಮತ್ತು ಸ್ಥಿರವಾಗಿರುವವರಲ್ಲಿ ಹಿಮಾಲಯ ನಾನಾಗಿದ್ದೇನೆ. ಸಮಸ್ತ ವೃಕ್ಷಗಳಲ್ಲಿ ಅಶ್ವತ್ಥ, ದೇವರ್ಷಿಗಳಲ್ಲಿ ನಾರದ, ಗಂಧರ್ವರಲ್ಲಿ ಚಿತ್ರರಥ ಮತ್ತು ಸಿದ್ಧರಲ್ಲಿ ಕಪಿಲ ಮುನಿಯು ನಾನು. ಕುದುರೆಗಳಲ್ಲಿ ಅಮೃತದ ಜೊತೆಯಲ್ಲಿ ಸಮುದ್ರದಿಂದ ಉತ್ಪತ್ತಿಯಾದ ಉಚ್ಚೈಃಶ್ರವಾ ಹೆಸರಿನ ಕುದುರೆಯನ್ನು, ಶ್ರೇಷ್ಠವಾದ ಆನೆಗಳಲ್ಲಿ ಐರಾವತ ಎಂಬ ಆನೆಯನ್ನು ಮತ್ತು ಮನುಷ್ಯರಲ್ಲಿ ರಾಜನನ್ನು ನನ್ನ ವಿಭೂತಿಯೆಂದು ತಿಳಿ. ॥೨೦-೨೭॥

**ಪರಮಾತ್ಮಾ ! ಮತ್ತಿನ್ನು ಯಾವುದನ್ನು ನಿನ್ನ ವಿಭೂತಿಯೆಂದು ಭಾವಿಸಲಿ?**

ಅಸ್ತ್ರ-ಶಸ್ತ್ರಗಳಲ್ಲಿ ವಜ್ರ ಮತ್ತು ಧೇನುಗಳಲ್ಲಿ ಕಾಮಧೇನು ನಾನಾಗಿರುವೆ. ಧರ್ಮಕ್ಕೆ ಅನುಕೂಲವಾದ ಸಂತಾನ ಉತ್ಪತ್ತಿಗೆ ಕಾರಣನಾದ ಕಾಮ ದೇವ ನಾನು ಮತ್ತು ಸರ್ಪಗಳಲ್ಲಿ ವಾಸುಕಿ ನಾನಾಗಿದ್ದೇನೆ. ನಾಗಗಳಲ್ಲಿ ಆದಿಶೇಷ, ಜಲಜಂತುಗಳ ಅಧಿಪತಿ ವರುಣ, ಪಿತೃಗಳಲ್ಲಿ ಅರ್ಯಮಾ ಮತ್ತು ದಂಡಾಧಿಕಾರಿಗಳಲ್ಲಿ ಯಮರಾಜ ನಾನು. ದೈತ್ಯರಲ್ಲಿ ಪ್ರಹ್ಲಾದ, ಗಣನೆ ಮಾಡುವುದರಲ್ಲಿ ಕಾಲ (ಸಮಯ), ಮೃಗಗಳಲ್ಲಿ ಸಿಂಹ ಮತ್ತು ಪಕ್ಷಿಗಳಲ್ಲಿ ಗರುಡ ನಾನಾಗಿರುವೆನು. ಪವಿತ್ರಗೊಳಿಸುವುದರಲ್ಲಿ ವಾಯು, ಶಸ್ತ್ರಧಾರಿಗಳಲ್ಲಿ ರಾಮ, ಜಲಚರಗಳಲ್ಲಿ ಮೊಸಳೆ ಮತ್ತು ಹರಿಯುವ ಪ್ರವಾಹಗಳಲ್ಲಿ ಗಂಗಾನದಿ ನಾನಾಗಿದ್ದೇನೆ. ॥೨೮-೩೧॥

**ನೀನು ಇನ್ನೂ ಯಾವು-ಯಾವುದರಲ್ಲಿರುವೆ?**

ಎಲೈ ಅರ್ಜುನ ! ಎಲ್ಲಾ ಸರ್ಗ (ಸೃಷ್ಟಿ)ಗಳ ಆದಿ, ಮಧ್ಯ ಮತ್ತು ಅಂತ್ಯದಲ್ಲಿ ನಾನೇ ಇದ್ದೇನೆ. ವಿದ್ಯೆಗಳಲ್ಲಿ ಅಧ್ಯಾತ್ಮವಿದ್ಯೆ ಮತ್ತು ಪರಸ್ಪರ ಶಾಸ್ತ್ರಾರ್ಥ ಮಾಡುವವರ ತತ್ತ್ವ ನಿರ್ಣಯಕ್ಕಾಗಿ ಮಾಡಲಾಗುವ ವಾದವು ನಾನು. ಅಕ್ಷರಗಳಲ್ಲಿ ಅಕಾರ ಮತ್ತು ಸಮಾಸಗಳಲ್ಲಿ ದ್ವಂದ್ವಸಮಾಸ ನಾನು. ಅಕ್ಷಯಕಾಲ ಅರ್ಥಾತ್ ಕಾಲಕ್ಕೂ ಸಹ ಮಹಾಕಾಲ ಹಾಗೂ ಎಲ್ಲಾ ಕಡೆಗಳಿಗೂ ಮುಖವುಳ್ಳವ (ವಿರಾಟ್ ರೂಪಿ) ಧಾತಾ ಸಹ ನಾನೇ ಆಗಿದ್ದೇನೆ. ॥೩೨-೩೩॥

**ಇನ್ನೂ ನೀನು ಯಾವ-ಯಾವ ರೂಪಗಳಲ್ಲಿರುವೆ?**

ಎಲ್ಲರನ್ನೂ ನಾಶಮಾಡುವ ಮೃತ್ಯು ಮತ್ತು ಉತ್ಪತ್ತಿಯಾಗುವವರ ಉತ್ಪತ್ತಿಗೆ ಕಾರಣ ನಾನಾಗಿದ್ದೇನೆ. ಸ್ತ್ರೀ-ಜಾತಿಯಲ್ಲಿ ಕೀರ್ತಿ, ಶ್ರೀ, ವಾಕ್, ಸ್ಮೃತಿ, ಮೇಧಾ, ಧೃತಿ ಮತ್ತು ಕ್ಷಮೆ ನಾನಾಗಿದ್ದೇನೆ. ಹಾಡುವ ಶ್ರುತಿಗಳಲ್ಲಿ ಬೃಹತ್ಸಾಮ ಮತ್ತು ವೈದಿಕ ಛಂದಸ್ಸುಗಳಲ್ಲಿ ಗಾಯತ್ರೀ ಛಂದಸ್ಸು ನಾನಾಗಿರುವೆ. ಹನ್ನೆರಡು ತಿಂಗಳುಗಳಲ್ಲಿ ಮಾರ್ಗಶೀರ್ಷ ಮತ್ತು ಆರು ಋತುಗಳಲ್ಲಿ ವಸಂತ ನಾನು. ಛಲ ಮಾಡುವವರಲ್ಲಿ ದ್ಯೂತವೂ ಮತ್ತು ತೇಜಸ್ವಿಗಳಲ್ಲಿನ ತೇಜಸ್ಸೂ ನಾನೇ, ಜಯಶಾಲಿಗಳ ವಿಜಯ, ನಿಶ್ಚಯ ಮಾಡುವವರ ನಿಶ್ಚಯ ಮತ್ತು ಸಾತ್ತ್ವಿಕ ಪುರುಷರ ಸಾತ್ತ್ವಿಕ ಭಾವವು ನಾನಾಗಿದ್ದೇನೆ. ॥೩೪-೩೬॥

**ಪರಮಾತ್ಮಾ ! ಇನ್ನು ಯಾವ ನಿನ್ನ ಸ್ವರೂಪಗಳಿವೆ?**

ವೃಷ್ಣಿ ವಂಶಿಯರಲ್ಲಿ ವಾಸುದೇವ, ಪಾಂಡವರಲ್ಲಿ ಧನಂಜಯ (ನೀನು), ಮುನಿಗಳಲ್ಲಿ ವೇದವ್ಯಾಸ ಮತ್ತು ಕವಿಗಳಲ್ಲಿ ಶುಕ್ರಾಚಾರ್ಯ ನಾನಾಗಿದ್ದೇನೆ. ದಮನ ಮಾಡುವುದರಲ್ಲಿ ದಂಡ, ವಿಜಯವನ್ನು ಬಯಸುವವರಲ್ಲಿ ನೀತಿ, ಗೋಪ್ಯ ಭಾವಗಳಲ್ಲಿ ಮೌನ ಮತ್ತು ಜ್ಞಾನಿಗಳಲ್ಲಿನ ಜ್ಞಾನ ನಾನೇ ಆಗಿದ್ದೇನೆ. ಇನ್ನೇನು ಹೇಳಲಿ ಸಮಸ್ತ ಪ್ರಾಣಿಗಳಿಗೆ ಬೀಜ (ಕಾರಣ) ನಾನೇ ಆಗಿರುವೆ ; ಏಕೆಂದರೆ ಎಲೈ ಅರ್ಜುನ ! ನಾನಿಲ್ಲದೆ ಯಾವ ಚರಾಚರ ಪ್ರಾಣಿಯೂ ಸಹ ಇಲ್ಲ ಅರ್ಥಾತ್ ಚರ-ಅಚರ ಸರ್ವವೂ ನಾನೇ ಆಗಿದ್ದೇನೆ. ॥೩೭-೩೯॥

**ಏನು ನೀನು ನಿನ್ನ ಎಲ್ಲಾ ವಿಭೂತಿಗಳನ್ನು ಪೂರ್ತಿಯಾಗಿ ಹೇಳಿಬಿಟ್ಟೆಯಾ ?**

ಇಲ್ಲ ಪರಂತಪಾ ! ನನ್ನ ದಿವ್ಯ ವಿಭೂತಿಗಳಿಗೆ ಅಂತ್ಯವೇ ಇಲ್ಲ. ನಾನು ನಿನ್ನ ಮುಂದೆ ನನ್ನ ವಿಭೂತಿಗಳನ್ನು ಯಾವ ವಿಸ್ತಾರವನ್ನು ಹೇಳಿರುವೆನೋ ಅದಾದರೋ

ಸಂಕ್ಷೇಪವಾಗಿ ಹೇಳಲಾಗಿವೆ ; ಏಕೆಂದರೆ ನಾನು ನನ್ನ ವಿಭೂತಿಗಳನ್ನು ಪೂರ್ಣವಾಗಿ ಹೇಳಲಾಗುವುದಿಲ್ಲ. ॥೪೦॥

**ಪರಮಾತ್ಮಾ ! ಆದರೂ ಸಹ ನಿನ್ನ ವಿಭೂತಿಗಳ ನಿಶ್ಚಿತವಾದ ಪರಿಚಯವೇನು?**

ಜಗತ್ತಿನಲ್ಲಿ ಯಾವ -ಯಾವ ಐಶ್ವರ್ಯಯುಕ್ತ, ಕಾಂತಿಯುಕ್ತ ಮತ್ತು ಬಲಯುತ ವಸ್ತುವಿದೆಯೋ, ಅದನ್ನು ನೀನು ನನ್ನದೇ ತೇಜಸ್ಸಿ (ಯೋಗ)ನ ಯಾವುದೋ ಅಂಶದಿಂದ ಉತ್ಪತ್ತಿಯಾದುದೆಂದು ತಿಳಿದುಕೋ. ಅಯ್ಯಾ ಅರ್ಜುನ ! ಸಂಪೂರ್ಣ ಜಗತ್ತನ್ನೂ (ಅನಂತಕೋಟಿ ಬ್ರಹ್ಮಾಂಡಗಳನ್ನು) ನನ್ನ ಯಾವುದೋ ಒಂದಂಶದಲ್ಲಿ ವ್ಯಾಪಿಸಿಕೊಂಡು ನಾನು ನಿನ್ನ ಮುಂದೆ ಕೈಯ್ಯಲ್ಲಿ ಲಗಾಮು ಮತ್ತು ಬಾರಕೋಲನ್ನು ಹಿಡಿದು ಕುಳಿತಿದ್ದೇನೆ, ನಿನ್ನ ಆಜ್ಞೆಯನ್ನು ಪಾಲಿಸುತ್ತೇನೆ, ಅಲ್ಲದೆ ನಿನಗೆ ಈ ಪ್ರಕಾರದ ಬಹಳ ವಿಚಾರಗಳನ್ನು ತಿಳಿದುಕೊಳ್ಳುವ ಅವಶ್ಯಕತೆಯೇನಿದೆ? ॥೪೧-೪೨॥



# ಹನ್ನೊಂದನೇ ಅಧ್ಯಾಯವು

ಅರ್ಜುನ ಹೇಳಿದನು - ಹೇ ಪರಮಾತ್ಮಾ ! ಕೇವಲ ನನ್ನ ಮೇಲೆ ಕೃಪೆಮಾಡುವುದಕ್ಕಾಗಿಯೇ ನೀನು ಯಾವ ಪರಮ ಗೋಪ್ಯವಾದ ಆಧ್ಯಾತ್ಮಿಕ ವಿಚಾರವನ್ನು (ಎಲ್ಲಕ್ಕೂ ಮೂಲದಲ್ಲಿ ನಾನಿದ್ದೇನೆ) ಹೇಳಿರುವೆ, ಅದರಿಂದ ನನ್ನ ಮೋಹ ನಾಶವಾಯಿತು. ಹೇ ಕಮಲನಯನ ! ನಾನು ನಿನ್ನಿಂದ ಸಮಸ್ತ ಪ್ರಾಣಿಗಳ ಉತ್ಪತ್ತಿ ಮತ್ತು ಪ್ರಳಯದ ವಿಷಯಗಳನ್ನು ಕೇಳಿದೆ ಹಾಗೂ ನಿನ್ನ ಅವಿನಾಶೀ ಮಹಾತ್ಮ್ಯೆಯನ್ನೂ ಸಹ ಸವಿಸ್ತಾರವಾಗಿ ಕೇಳಿದೆನು ಆಗ ಭಗವಂತನೆಂದ. ||೧-೨||

**ಈಗ ನೀನು ಇನ್ನೇನನ್ನೂ ಇಚ್ಛಿಸುವೆ?**

ಹೇ ಪುರುಷೋತ್ತಮ ! ನೀನು ನಿನ್ನ ಕುರಿತು ಹೇಳುವ ಮಾತೆಲ್ಲವೂ ಸರಿಯಾಗಿ ಹಾಗೆಯೇ ಇದೆ. ಈಗ ಹೇ ಪರಮೇಶ್ವರ ! ನಾನು ನಿನ್ನ ಒಂದಂಶದಲ್ಲಿ ಅನಂತಕೋಟಿ ಬ್ರಹ್ಮಾಂಡಗಳು ವ್ಯಾಪಿಸಲ್ಪಟ್ಟಿರುವ ಆ ಪರಮ ಈಶ್ವರಿಯ ರೂಪವನ್ನು ನೋಡಬೇಕೆಂದು ಇಚ್ಛಿಸುತ್ತೇನೆ. ಆದರೆ ಹೇ ಪ್ರಭು! ನನ್ನಿಂದ ನಿನ್ನ ಆ ಪರಮ ಈಶ್ವರೀಯ ರೂಪವನ್ನು ನೋಡಲಾಗಬಹುದು - ಎಂಬುದಾಗಿ ನೀನು ಭಾವಿಸುವುದಾದರೆ ಹೇ ಯೋಗೇಶ್ವರ ! ನೀನು ನಿನ್ನ ಆ ಅವಿನಾಶೀ ಸ್ವರೂಪವನ್ನು ನನಗೆ ತೋರಿಸು. ||೩-೪||

ಭಗವಂತ ಹೇಳಿದನು - ಎಲೈ ಪಾರ್ಥ ! ನೀನು ನನ್ನ ಒಂದು ರೂಪವನ್ನೇ ಏಕೆ - ದಿವ್ಯವಾದ, ಅನೇಕ ಪ್ರಕಾರಗಳ, ಅನೇಕ ಬಣ್ಣಗಳ ಮತ್ತು ಅನೇಕ ರೀತಿಯ ಆಕೃತಿಗಳ ನನ್ನ ನೂರಾರು-ಸಾವಿರಾರು ರೂಪುಗಳನ್ನು ನೋಡು. ||೫||

**ಪರಮಾತ್ಮಾ ! ಇನ್ನೇನನ್ನು ನೋಡಲಿ?**

ಹೇ ಭಾರತ ! ನೀನು ಆದಿತ್ಯರನ್ನು, ವಸುಗಳನ್ನು, ರುದ್ರರನ್ನು, ಅಶ್ವಿನೀ ಕುಮಾರರನ್ನು ಹಾಗೂ ಮರುದ್ಗಣಗಳನ್ನೂ ಸಹ ನೋಡು. ಯಾವ ರೂಪಗಳನ್ನು ನೀನು ಮೊದಲು ಯಾವಾಗಲೂ ನೋಡಿಯೇ ಇಲ್ಲವೋ, ಅಂತಹ ಅನೇಕಾನೇಕ ಆಶ್ಚರ್ಯಜನಕ ರೂಪಗಳನ್ನು ಸಹ ನೀನು ನೋಡು. ||೬||

**ನಾನು ಎಲ್ಲಿ ನೋಡಲಿ?**

ನಿದ್ರೆಯನ್ನು ಜಯಿಸುವ ಎಲೈ ಅರ್ಜುನ ! ನನ್ನೀ ಶರೀರದ ಯಾವುದೇ ಒಂದು ಅಂಶದಲ್ಲಿಯೂ ಕೂಡ ಚರಾಚರ ಸಹಿತ ಇಡೀ ಜಗತ್ತನ್ನು ನೀನು

ಈಗಲೇ ನೋಡು. ಇದೂ ಅಲ್ಲದೆ ನೀನು ಇನ್ನೂ ಸಹ ಏನನ್ನಾದರೂ ನೋಡಲು ಬಯಸುವುದಾದರೆ ಅದನ್ನೂ ಸಹ ನೀನು ನೋಡು.* ॥೭॥

**ನೀನು ಪದೇ ಪದೇ 'ನೀನು ನೋಡು, ನೀನು ನೋಡು' - ಎಂದು ಹೇಳುತ್ತಾ ಇರುವೆ, ಆದರೆ ನನಗಾದರೋ ಅದು ಕಾಣಿಸುತ್ತಾ ಇಲ್ಲ, ಹೇಗೆ ನೋಡಲಿ?**

ಅಯ್ಯಾ ! ನೀನು ನಿನ್ನ ಈ ಚರ್ಮಚಕ್ಷುಗಳಿಂದ ನನ್ನನ್ನು ನೋಡಲಾರೆ. ನಾನು ನಿನಗೆ ದಿವ್ಯ ಚಕ್ಷುಗಳನ್ನು ಕೊಡುತ್ತೇನೆ, ಅದರಿಂದ ನೀನು ನನ್ನ ಈ ಈಶ್ವರ- ಸಂಬಂಧೀ ಸಾಮರ್ಥ್ಯವನ್ನು ನೋಡು. ॥೮॥

**ಸಂಜಯ ! ಆ ರೀತಿ ಹೇಳಿ ಭಗವಂತನು ಏನು ಮಾಡಿದನು?**

ಸಂಜಯ ಹೇಳಿದನು - ಓ ರಾಜಾ ! ಹೀಗೆ ಹೇಳಿ ಮಹಾಯೋಗೇಶ್ವರ ಭಗವಾನ್ ಶ್ರೀಕೃಷ್ಣನು ಅರ್ಜುನನಿಗೆ ತನ್ನ ಪರಮ ಐಶ್ವರ್ಯಮಯ ರೂಪವನ್ನು ತೋರಿಸಿದನು. ॥೯॥

**ಯಾವ ಬಗೆಯ ರೂಪವನ್ನು ತೋರಿಸಿದನು?**

ಅನೇಕ ಮುಖಗಳೂ ಮತ್ತು ಕಣ್ಣುಗಳೂ, ಅನೇಕ ಬಗೆಯ ಅದ್ಭುತ ದರ್ಶನಗಳೂ, ಅನೇಕ ದಿವ್ಯಾಭರಣಗಳೂ ಮತ್ತು ಕೈಗಳಲ್ಲಿ ಅನೇಕ ರೀತಿಯ ದಿವ್ಯ ಅಸ್ತ್ರ-ಶಸ್ತ್ರಗಳನ್ನು ಹಿಡಿದ, ಅನೇಕ ದಿವ್ಯ ಮಾಲೆಗಳನ್ನು ಮತ್ತು ದಿವ್ಯ ವಸ್ತ್ರಗಳನ್ನೂ ಧರಿಸಿರುವ, ಶರೀರಕ್ಕೆ ಅನೇಕ ಬಗೆಯ ದಿವ್ಯ ಚಂದನಾದಿಗಳನ್ನೂ ಲೇಪಿಸಿರುವ-ಇಂತಹ ತೀರಾ ಆಶ್ಚರ್ಯಮಯವಾದ ಮತ್ತು ಸರ್ವತೋಮುಖ ವುಳ್ಳ ತನ್ನ ಅನಂತರೂಪವನ್ನು ತೋರಿಸಿದನು. ॥೧೦-೧೧॥

**ಆ ರೂಪು ಏಕೆ ಆಶ್ಚರ್ಯಕರವಾಗಿದ್ದಿತ್ತು, ಸಂಜಯ?**

ಆಕಾಶದಲ್ಲಿ ಸಾವಿರಾರು ಸೂರ್ಯರು ಒಮ್ಮೆಗೆ ಉದಯಿಸಿದರೂ ಸಹ ಆ ಎಲ್ಲಾ ಪ್ರಕಾಶ ಸೇರಿಕೊಂಡರೂ ಆ ವಿಶ್ವರೂಪ ಪ್ರಕಾಶದ ಮುಂದೆ ಅದು ಏನೂ ಅಲ್ಲ. ॥೧೨॥

**ಅರ್ಜುನನು ಆ ರೂಪವನ್ನು ಎಲ್ಲಿ ನೋಡಿದನು?**

ಅರ್ಜುನನು ದೇವಾದಿದೇವ ಭಗವಾನ್ ಶ್ರೀಕೃಷ್ಣನ ಶರೀರದ ಒಂದು

---

* ಅರ್ಜುನ ಮತ್ತೇನನ್ನೋ ನೋಡಲಿಚ್ಛಿಸುತ್ತಿದ್ದನು? ಯುದ್ಧದಲ್ಲಿ ವಿಜಯ ನಮ್ಮದೇ ಆಗುವುದೋ ಅಥವಾ ಕೌರವರದೋ? - ಎಂಬೀ ಸಂದೇಹ ಅರ್ಜುನನ ಮನಸ್ಸಿನಲ್ಲಿದ್ದಿತು (ಗೀತಾ-೨/೬). ಆದುದರಿಂದ ಭಗವಂತನು ಹೀಗೆ ಹೇಳುತ್ತಾನೆ - 'ಅದನ್ನೂ ಸಹ ನೀನು ನನ್ನ ಈ ಶರೀರದ ಒಂದು ಅಂಶದಲ್ಲಿ ನೋಡಿಕೋ.

ಅಂಶದಲ್ಲಿ ಸಂಪೂರ್ಣ ಜಗತ್ತನ್ನು ಅನೇಕ ವಿಭಾಗಗಳಿಂದ ಕೂಡಿರುವುದನ್ನು ನೋಡಿದನು. ॥೧೩॥

**ಸಂಜಯ ! ಆ ರೂಪವನ್ನು ನೋಡಿ ಅರ್ಜುನನು ಏನು ಮಾಡಿದ?**

ಭಗವಂತನ ಆ ವಿಶ್ವರೂಪವನ್ನು ನೋಡಿ ಅರ್ಜುನನು ಬಹಳ ಆಶ್ಚರ್ಯಚಕಿತನಾಗಿ ರೋಮಾಂಚನಗೊಂಡನು. ಅವನು ಕೈಮುಗಿದುಕೊಂಡು ಮತ್ತು ತಲೆಬಾಗಿ ನಮಸ್ಕಾರ ಮಾಡುತ್ತಾ ವಿಶ್ವರೂಪೀ ಭಗವಂತನ ಸ್ತೋತ್ರ ಮಾಡಲಾರಂಭಿಸಿದನು. ॥೧೪॥

**ಸಂಜಯ ! ಅರ್ಜುನ ಏನು ಹೇಳಿದನು?**

ಅರ್ಜುನ ಹೇಳಿದನು - ಹೇ ದೇವ ! ನಾನು ನಿನ್ನ ಶರೀರದಲ್ಲಿ ಎಲ್ಲಾ ದೇವತೆಗಳನ್ನೂ, ಪ್ರಾಣಿಗಳ ವಿಶೇಷ-ವಿಶೇಷ ಸಮುದಾಯಗಳನ್ನೂ, ಕಮಲಾಸನದ ಮೇಲೆ ಕುಳಿತಿರುವ ಬ್ರಹ್ಮನನ್ನೂ, ಕೈಲಾಸದಲ್ಲಿ ವಿರಾಜಮಾನನಾಗಿರುವ ಶಂಕರನನ್ನೂ, ಎಲ್ಲಾ ಋಷಿಗಳನ್ನೂ ಹಾಗೂ ದಿವ್ಯ ಸರ್ಪಗಳನ್ನೂ ನೋಡುತ್ತಿದ್ದೇನೆ. ॥೧೫॥

ಹೇ ವಿಶ್ವರೂಪೀಯೇ ! ಹೇ ವಿಶ್ವೇಶ್ವರಾ ! ನಾನು ನಿನ್ನ ಅನೇಕ ಕೈಗಳು, ಉದರಗಳು, ಮುಖಗಳು ಮತ್ತು ಕಣ್ಣುಗಳುಳ್ಳ ಹಾಗೂ ಎಲ್ಲ ಕಡೆಗಳಿಂದ ಅನಂತ ರೂಪವುಳ್ಳವನನ್ನು ನೋಡುತ್ತಿದ್ದೇನೆ. ನಾನು ನಿನ್ನ ಆದಿ, ಮಧ್ಯ ಮತ್ತು ಅಂತ್ಯವನ್ನು ಸಹ ಕಾಣುತ್ತಾ ಇಲ್ಲ. ನಾನು ನಿನ್ನ ತಲೆಯಲ್ಲಿನ ಮುಕುಟ ಹಾಗೂ ಕೈಗಳಲ್ಲಿ ಗದೆ, ಚಕ್ರ (ಶಂಖ ಮತ್ತು ಪದ್ಮ) ಧರಿಸಿರುವ, ತೇಜಃಪುಂಜಗಳು, ಎಲ್ಲಾ ಕಡೆಯೂ ಕಷ್ಟದಿಂದ ನೋಡಲಾಗುವಂತಹ ಪ್ರಕಾಶವನ್ನುಂಟುಮಾಡುವ, ದೇದೀಪ್ಯಮಾನವಾದ ಅಗ್ನಿ ಮತ್ತು ಸೂರ್ಯರಿಗೆ ಸಮಾನವಾದ ಕಾಂತಿಯ ನೇತ್ರಗಳನ್ನು ಮತ್ತು ಎಲ್ಲಾ ಕಡೆಗಳಿಂದಲೂ ಅಪ್ರಮೇಯ ಸ್ವರೂಪವನ್ನು ನೋಡುತ್ತಿದ್ದೇನೆ. ॥೧೬-೧೭॥

ಹೇ ನಾಥ ! ನೀನೇ ತಿಳಿಯಲು ಯೋಗ್ಯ ಪರಮ ಅಕ್ಷರಬ್ರಹ್ಮನಾಗಿರುವೆ, ನೀನೇ ಈ ಇಡೀ ವಿಶ್ವಕ್ಕೆ ಪರಮ ಆಧಾರನಾಗಿರುವೆ ಮತ್ತು ನೀನೇ ಸನಾತನ ಧರ್ಮದ ರಕ್ಷಣೆಮಾಡುವ ಸನಾತನ ಪುರುಷನಾಗಿರುವೆ - ಎಂದು ನಾನು ತಿಳಿಯುತ್ತೇನೆ. ॥೧೮॥

**ಅರ್ಜುನ ! ಕೇವಲ ತಿಳಿಯುತ್ತಿರುವೆಯೋ ಅಥವಾ ನೋಡುತ್ತಲೂ ಇರುವೆಯೋ?**

ನಾನು ನಿನ್ನನ್ನು ಆದಿ, ಮಧ್ಯ ಮತ್ತು ಅಂತ್ಯ ರಹಿತನೂ, ಅನಂತ

ಪ್ರಭಾವಶಾಲಿಯೂ, ಅನಂತ ಭುಜಗಳುಳ್ಳವನೂ, ಚಂದ್ರ ಮತ್ತು ಸೂರ್ಯರೂಪೀ ಕಣ್ಣುಗಳುಳ್ಳವನೂ ಪ್ರಜ್ವಲಿಸುವ ಅಗ್ನಿಗೆ ಸಮಾನವಾದ ಮುಖಗಳುಳ್ಳವನೂ ಮತ್ತು ತನ್ನ ತೇಜಸ್ಸಿನಿಂದ ಇಡೀ ಜಗತ್ತಿಗೇ ತಾಪ ಕೊಡುತ್ತಿರುವುದನ್ನೂ ನೋಡುತ್ತಿದ್ದೇನೆ. ॥೧೯॥

ಹೇ ಮಹಾತ್ಮಾ ! ಈ ಸ್ವರ್ಗ ಮತ್ತು ಪೃಥ್ವಿಯ ಮಧ್ಯದ ಅಂತರಾಳ ಮತ್ತು ದಶ-ದಿಕ್ಕುಗಳೂ ಏಕಮಾತ್ರ ನಿನ್ನಿಂದಲೇ ಪರಿಪೂರ್ಣಗೊಳ್ಳುತ್ತಾ ಇವೆ. ನಿನ್ನ ಈ ಅದ್ಭುತ ಮತ್ತು ಉಗ್ರರೂಪವನ್ನು ನೋಡಿ ಮೂರು ಲೋಕಗಳೂ ದುಃಖಕ್ಕೊಳಗಾಗುತ್ತಾ ಇವೆ. ಓಹೋ ! ಆ ದೇವತೆಗಳ ಸಮುದಾಯವೇ (ನಾನು ಮೊದಲು ಸ್ವರ್ಗದಲ್ಲಿ ನೋಡಿದ್ದ) ನಿನ್ನಲ್ಲಿ ಪ್ರವೇಶಿಸುತ್ತಾ ಇವೆ. ಅವರುಗಳಲ್ಲಿ ಕೆಲವರಾದರೋ ಭಯ ಭೀತರಾಗಿ ಕೈಮುಗಿದುಕೊಂಡು ನಿನ್ನ ನಾಮ ಮತ್ತು ಗುಣಗಳ ಕೀರ್ತನೆ ಮಾಡುತ್ತಾ ಇದ್ದಾರೆ. ಮಹರ್ಷಿಗಳ ಮತ್ತು ಸಿದ್ಧರ ಸಮುದಾಯಗಳು 'ಮಂಗಳವಾಗಲಿ' ! ಎಂದು ಹೇಳಿ ಅತ್ಯುತ್ಕೃಷ್ಟವಾದ ಸ್ತೋತ್ರಗಳ ಮೂಲಕ ನಿನ್ನನ್ನು ಸ್ತುತಿಸುತ್ತಾ ಮಂಗಳಾಶಾಸನ ಮಾಡುತ್ತಿದ್ದಾರೆ. ॥೨೦-೨೧॥

ರುದ್ರರು, ಆದಿತ್ಯರು, ವಸುಗಳು, ಸಾಧ್ಯಗಣ, ವಿಶ್ವೇದೇವ, ಅಶ್ವಿನೀ - ಕುಮಾರರು, ಮರುದ್ಗಣ, ಪಿತೃಸಮುದಾಯ, ಗಂಧರ್ವರು, ಯಕ್ಷರು, ಅಸುರರು ಮತ್ತು ಸಿದ್ಧರ ಸಮುದಾಯ ಮೊದಲಾದವರೆಲ್ಲರೂ ಆಶ್ಚರ್ಯಚಕಿತರಾಗಿ ನಿನ್ನನ್ನು ನೋಡುತ್ತಾ ಇದ್ದಾರೆ. ॥೨೨॥

ಹೇ ಮಹಾಬಾಹು ! ನಿನ್ನ ಅನೇಕ ಮುಖಗಳುಳ್ಳ ಮತ್ತು ಕಣ್ಣುಗಳುಳ್ಳ. ಅನೇಕ ಭುಜಗಳುಳ್ಳ, ತೊಡೆಗಳುಳ್ಳ, ಮತ್ತು ಕಾಲುಗಳುಳ್ಳ, ಅನೇಕ ಉದರಗಳುಳ್ಳ ಹಾಗೂ ಅನೇಕ ವಿಕರಾಳ ದವಡೆಗಳುಳ್ಳ ಮಹಾನ್ ರೂಪವನ್ನು ನೋಡಿ ಎಲ್ಲಾ ಪ್ರಾಣಿಗಳೂ ಭಯಭೀತರಾಗುತ್ತಿದ್ದಾರೆ ಹಾಗೂ ನಾನೂ ಸಹ ಭಯ ಗೊಂಡಿದ್ದೇನೆ. ॥೨೩॥

ಹೇ ಮಹಾವಿಷ್ಣು ! ಅನೇಕ ಪ್ರಕಾಶಮಯ ವರ್ಣಗಳಿಂದ ಕೂಡಿದವನು, ಆಕಾಶವನ್ನು ಸ್ಪರ್ಶಿಸುವನೂ, ವಿಶಾಲವಾಗಿ ತೆರೆದ ಬಾಯಿಗಳುಳ್ಳವನೂ, ಹಾಗೂ ಪ್ರಕಾಶವಾದ ಮತ್ತು ವಿಶಾಲವಾದ ಕಣ್ಣುಗಳುಳ್ಳ ನಿನ್ನ ದೇದೀಪ್ಯಮಾನ ರೂಪುಗಳನ್ನು ನೋಡಿ ಮನಸ್ಸಿನಲ್ಲಿ ಭಯಭೀತನಾದ ನಾನು ಧೈರ್ಯ ಮತ್ತು ಶಾಂತಿಗಳಿಲ್ಲದವನಾಗಿದ್ದೇನೆ. ಪ್ರಳಯಕಾಲದ ಅಗ್ನಿಗೆ ಸಮಾನವಾಗಿ ಪ್ರಜ್ವಲಿಸುವ ಮತ್ತು ಕೋರೆದಾಡೆಗಳ ಕಾರಣ ಭಯಂಕರವಾದ ನಿನ್ನ ಮುಖಗಳನ್ನು ನೋಡಿ ನನಗೆ ದಿಕ್ಕೇ ತೋಚದಂತಾಗುತ್ತಿದೆ ಮತ್ತು ಶಾಂತಿಯೂ ಸಹ ದೊರೆಯುತ್ತಾ

ಇಲ್ಲ. ಆದುದರಿಂದ ಹೇ ದೇವೇಶ ! ಹೇ ಜಗನ್ನಿವಾಸ ! ನೀನು ಪ್ರಸನ್ನನಾಗು. ॥೨೪-೨೫॥

ನಮ್ಮ ಪಕ್ಷದ ಮುಖ್ಯ ಯೋಧರ ಸಹಿತ ಭೀಷ್ಮ, ದ್ರೋಣ ಮತ್ತು ಕರ್ಣನೂ ಸಹ ನಿನ್ನಲ್ಲಿ ಪ್ರವೇಶಿಸುತ್ತಿದ್ದಾರೆ. ರಾಜರುಗಳ ಸಮುದಾಯಗಳ ಸಹಿತ ಧೃತರಾಷ್ಟ್ರನ ಸಮಸ್ತ ಪುತ್ರರು ನಿನ್ನ ವಿಕರಾಳ ಕೋರೆದಾಡೆಗಳ ಕಾರಣ ಭಯಂಕರವಾದ ಮುಖಗಳಲ್ಲಿ ಬಹು ವೇಗವಾಗಿ ಪ್ರವೇಶಿಸುತ್ತಿದ್ದಾರೆ. ಅವರುಗಳಲ್ಲಿ, ಕೆಲವರಂತೂ ಚೂರಾದ ತಲೆಗಳ ಸಹಿತ ನಿನ್ನ ಹಲ್ಲುಗಳ ಮಧ್ಯೆ ಸಿಕ್ಕಿಹಾಕಿಕೊಂಡಿರುವಂತೆ ಕಾಣುತ್ತಿದ್ದಾರೆ. ॥೨೬-೨೭॥

ನದಿಗಳ ಸಕಲ ಜಲ ಪ್ರವಾಹಗಳೆಲ್ಲಾ ಸ್ವಾಭಾವಿಕವಾಗಿಯೇ ಸಮುದ್ರದ ಕಡೆಗೆ ಓಡುವಂತೆ ಮಾನವಲೋಕದ ಆ ಭೀಷ್ಮ ದ್ರೋಣರೇ ಮುಂತಾದ ಮಹಾನ್ ಶೂರ-ವೀರರೆಲ್ಲಾ ನಿನ್ನ ಪ್ರಜ್ವಲಿಸುವ ನಿನ್ನ ಮುಖಗಳಲ್ಲಿ ಪ್ರವೇಶಿಸುತ್ತಿದ್ದಾರೆ. ಹೇಗೆ ಪತಂಗಗಳು ಮೋಹವಶವಾಗಿ ತಮ್ಮ ನಾಶಕ್ಕಾಗಿಯೇ ಬಹು ವೇಗದಿಂದ ಓಡುತ್ತಾ ಹೋಗಿ ಪ್ರಜ್ವಲಿಸುವ ಅಗ್ನಿಯಲ್ಲಿ ಪ್ರವೇಶಿಸುತ್ತವೆಯೋ, ಅದರಂತೆಯೇ ಈ ದುರ್ಯೋಧನಾದಿ ಎಲ್ಲಾ ಜನರೂ ಮೋಹವಶದಿಂದ ತಮ್ಮನ್ನು ನಾಶಮಾಡಿಕೊಳ್ಳುವುದಕ್ಕಾಗಿ ಬಹಳ ವೇಗದಿಂದ ಓಡುತ್ತಾ ನಿನ್ನ ಮುಖಗಳಲ್ಲಿ ಪ್ರವೇಶಿಸುತ್ತಿದ್ದಾರೆ ಮತ್ತು ನೀನೂ ಸಹ ಪ್ರಜ್ವಲಿಸುವ ನಿನ್ನ ಮುಖಗಳಿಂದ ಎಲ್ಲರನ್ನೂ ಕಬಳಿಸುತ್ತಾ ಸುತ್ತಲಿನಿಂದಲೂ ಪದೇ-ಪದೇ ಚಪ್ಪರಿಸುತ್ತಾ ಇರುವೆ. ಹೇ ವಿಷ್ಣು! ನಿನ್ನ ಉಗ್ರ ಪ್ರಕಾಶವು ತನ್ನ ತೇಜಸ್ಸಿನಿಂದ ಇಡೀ ಜಗತ್ತನ್ನು ಪರಿಪೂರ್ಣಗೊಳಿಸಿ ಎಲ್ಲವನ್ನೂ ದಹಿಸುತ್ತಾ ಇದೆ. ॥೨೮-೩೦॥

**ಹೇ ದೇವಶ್ರೇಷ್ಠನೇ ! ನಿನಗೆ ನಮಸ್ಕಾರ. ನೀನು ಪ್ರಸನ್ನನಾಗು. ಆದಿ ರೂಪಿಯಾದ ನಿನ್ನನ್ನು ನಾನು ತತ್ತ್ವದಿಂದ ತಿಳಿದುಕೊಳ್ಳಲು ಇಚ್ಛಿಸುತ್ತೇನೆ. ಉಗ್ರರೂಪಿಯಾದ ನೀನು ಯಾರೆಂಬುದನ್ನು ನನಗೆ ತಿಳಿಸು?**

ಭಗವಂತ ಹೇಳಿದನು - ನಾನು ಎಲ್ಲಾ ಲೋಕಗಳನ್ನು ನಾಶಮಾಡುವ ಮಹಾಕಾಲನಾಗಿದ್ದೇನೆ.

**ಪರಮಾತ್ಮಾ ! ನೀನು ಇಲ್ಲಿಗೇಕೆ ಬಂದಿರುವೆ?**

ಈಗ ನಾನು ಈ ಜನರನ್ನೆಲ್ಲಾ ಸಂಹಾರ ಮಾಡುವುದಕ್ಕಾಗಿ ಇಲ್ಲಿಗೆ ಬಂದಿದ್ದೇನೆ.

**ಇಲ್ಲಿ ನಿನ್ನಿಂದ ಯಾರಾದರೂ ಬದುಕುವರೋ ಅಥವಾ ಇಲ್ಲವೋ?**

ನಿನ್ನ ಪ್ರತಿಪಕ್ಷದಲ್ಲಿ ಎಷ್ಟು ಮಂದಿ ಯೋಧರು ನಿಂತಿದ್ದಾರೆಯೋ

ಅವರೆಲ್ಲರೂ ನೀನು ಯುದ್ಧ ಮಾಡದೇ ಹೋದರೂ ಸಹ ಉಳಿಯಲಾರರು. ಇವರೆಲ್ಲರನ್ನು ನಾನು ಈ ಮೊದಲೇ ಕೊಂದಿರುವೆನು. ಆದುದರಿಂದ ನೀನು ಯುದ್ಧ ಮಾಡಲು ಸಿದ್ಧನಾಗಿ ಎದ್ದು ನಿಲ್ಲು ಮತ್ತು ಯಶಸ್ಸನ್ನು ಪಡೆದುಕೋ ಹಾಗೂ ಶತ್ರುಗಳನ್ನು ಜಯಿಸಿ ಧನ-ಧಾನ್ಯಗಳಿಂದ ಸಂಪದ್ಭರಿತವಾದ ರಾಜ್ಯವನ್ನು ಪಡೆದುಕೋ.

**ಹಾಗಾದರೆ ನಾನು ಯುದ್ಧ ಮಾಡುವ ಅಗತ್ಯವೇನು?**

ಎಲೈ ಸವ್ಯಸಾಚಿ ! ನೀನು ಕೇವಲ ನಿಮಿತ್ತಮಾತ್ರನಾಗು. ॥೩೧-೩೩॥

**ಆದರೆ ಮಹಾಪ್ರಭು ! ಭೀಷ್ಮ, ದ್ರೋಣ, ಜಯದ್ರಥ, ಕರ್ಣ ಮುಂತಾದ ಮಹಾಶೂರರನ್ನು ಜಯಿಸುವುದು ಹೇಗೆ?**

ಭೀಷ್ಮ, ದ್ರೋಣ, ಜಯದ್ರಥ, ಕರ್ಣ ಹಾಗೂ ಇನ್ನೂ ಸಹ ಎಷ್ಟು ಮಂದಿ ವೀರರಿದ್ದಾರೆಯೋ, ಅವರೆಲ್ಲರೂ ನನ್ನಿಂದ ಮೊದಲೇ ಹತರಾಗಿದ್ದಾರೆ. ನಾನು ಕೊಂದಿರುವ ಆ ಶೂರರನ್ನೇ ನೀನು ಕೊಲ್ಲು. ಆದುದರಿಂದ ನೀನು ಭಯಪಡದೆ ಯುದ್ಧ ಮಾಡು. ಯುದ್ಧದಲ್ಲಿ ನೀನು ಸಂಪೂರ್ಣ ಶತ್ರುಗಳನ್ನೆಲ್ಲಾ ಜಯಿಸುವೆ. ॥೩೪॥

**ಸಂಜಯ ! ಅನಂತರ ಏನಾಯಿತು?**

ಸಂಜಯ ಹೇಳಿದನು - ಭಗವಂತನಾದ ಕೇಶವನ ಆ ವಚನಗಳನ್ನು ಕೇಳಿ ಭಯದಿಂದ ನಡುಗುತ್ತಾ ಅರ್ಜುನನು ಕೈಮುಗಿದು ನಮಸ್ಕಾರ ಮಾಡಿದನು ಮತ್ತು ಅತ್ಯಂತ ಭಯಭೀತನಾಗಿ ಪುನಃ ನಮಸ್ಕಾರ ಮಾಡಿ ಗದ್ಗದವಾಣಿಯಿಂದ ಶ್ರೀಕೃಷ್ಣ ಪರಮಾತ್ಮನನ್ನು ಸ್ತುತಿಸಲಾರಂಭಿಸಿದನು. ॥೩೫॥

ಅರ್ಜುನ ಹೇಳಿದನು - ಹೇ ಅಂತರ್ಯಾಮೀ ಭಗವಂತ ! ನಿನ್ನ ನಾಮ, ಗುಣಾದಿಗಳ ಕೀರ್ತನೆ ಮಾಡುವುದರಿಂದ ಈ ಇಡೀ ಜಗತ್ತು ಹರ್ಷಗೊಳ್ಳುತ್ತಾ ಇದೆ ಮತ್ತು ಅನುರಾಗ ಪಡೆಯುತ್ತಾ ಇದೆ. ನಿನ್ನ ನಾಮ, ಗುಣ ಇತ್ಯಾದಿಗಳ ಕೀರ್ತನೆಯಿಂದ ಹೆದರಿಹೋಗಿ ರಾಕ್ಷಸರೆಲ್ಲಾ ಹತ್ತು ದಿಕ್ಕುಗಳಿಗೆಲ್ಲಾ ಓಡುತ್ತಿದ್ದಾರೆ ಮತ್ತು ಸಿದ್ಧರ ಸಮೂಹವು ನಿನಗೆ ನಮಸ್ಕಾರ ಮಾಡುತ್ತಾ ಇದೆ. ಇದೆಲ್ಲಾ ನಡೆಯುವುದು ಉಚಿತವೇ ಆಗಿದೆ. ॥೩೬॥

**ಅರ್ಜುನ ! ಇದೆಲ್ಲವೂ ಉಚಿತವೇಕೆ?**

ಏಕೆಂದರೆ ನೀನು ಅನಂತ, ದೇವತೆಗಳಿಗೆಲ್ಲಾ ಒಡೆಯ ಮತ್ತು ಈ ಜಗತ್ತಿಗೆ ಆಧಾರನಾಗಿರುವೆ, ನೀನು ಅಕ್ಷರಸ್ವರೂಪಿ. ನೀನು ಸತ್ ಸಹ ಹೌದು, ಅಸತ್

ಸಹ ಹೌದು ಮತ್ತು ಸತ್-ಅಸತ್‌ಗಿಂತಲೂ ಸಹ ಯಾವುದು ಶ್ರೇಷ್ಠವಾದದ್ದೋ, ಅದೂ ಸಹ ನೀನೇ. ಹೇ ಮಹಾತ್ಮಾ ! ನೀನು ಗುರುಗಳಿಗೆಲ್ಲಾ ಗುರು ಮತ್ತು ಬ್ರಹ್ಮನನ್ನು ಸಹ ಸೃಷ್ಟಿಸುವವನಾಗಿರುವೆ ಇಂತಹ ನಿನಗೆ ಆ ಸಿದ್ಧರ ಸಮುದಾಯ ಏಕೆ ನಮಸ್ಕಾರ ಮಾಡಲಾರದು. ॥೩೭॥

ನೀನೇ ಆದಿದೇವ ಮತ್ತು ಪುರಾಣ ಪುರುಷನಾಗಿರುವೆ ನೀನೇ ಈ ಪ್ರಪಂಚಕ್ಕೆ ಪರಮ ಆಧಾರ. ನೀನೇ ಎಲ್ಲರನ್ನು ತಿಳಿದುಕೊಳ್ಳುವವನು ಮತ್ತು ತಿಳಿದುಕೊಳ್ಳಲು ಯೋಗ್ಯನಾದವನಾಗಿರುವೆ. ನೀನೇ ಎಲ್ಲರ ಪರಮ ಗಂತವ್ಯ (ಸೇರಬೇಕಾದ) ಸ್ಥಾನವಾಗಿರುವೆ. ಹೇ ಅನಂತರೂಪೀ ! ನಿನ್ನಿಂದಲೇ ಇಡೀ ಜಗತ್ತು ವ್ಯಾಪಿಸಲ್ಪಟ್ಟಿದೆ. ॥೩೮॥

ನೀನೇ ವಾಯು, ಯಮರಾಜ, ಅಗ್ನಿ, ವರುಣ, ಚಂದ್ರ, ಪ್ರಜಾಪತಿ ಮತ್ತು ಪಿತಾಮಹ ಬ್ರಹ್ಮನಿಗೂ ಸಹ ತಂದೆಯಾಗಿರುವೆ. ಆದುದರಿಂದ ನಿನಗೆ ಸಾವಿರಾರು ಬಾರಿ ನಮಸ್ಕಾರಗಳು ! ನಮಸ್ಕಾರಗಳು ! ನಿನಗೆ ಪದೇ ಪದೇ ನಮಸ್ಕಾರಗಳು ! ನಮಸ್ಕಾರಗಳು ! ನಿನಗೆ ಮುಂದಿನಿಂದ ನಮಸ್ಕಾರಗಳು, ಹಿಂದಿನಿಂದ ನಮಸ್ಕಾರಗಳು ! ಎಲ್ಲಾ ಕಡೆಗಳಿಂದಲೂ ನಮಸ್ಕಾರಗಳು ಇರಲಿ. ಹೇ ಅನಂತವೀರ್ಯನೇ ! ನೀನು ಅಮಿತ ವಿಕ್ರಮಶಾಲಿ. ನೀನು ಇಡೀ ಜಗತ್ತನ್ನು ವ್ಯಾಪಿಸಿಕೊಂಡಿರುವೆ, ಆದುದರಿಂದ ಸರ್ವಸ್ವವೂ ನೀನೇ ಆಗಿರುವೆ. ॥೩೯-೪೦॥

ಹೇ ಪರಮಾತ್ಮಾ ! ನಿನ್ನ ಈ ಮಹಿಮೆ ಮತ್ತು ಸ್ವರೂಪವನ್ನು ತಿಳಿಯದೆ ನಾನು ನಿನ್ನನ್ನು ಸ್ನೇಹಿತನೆಂದು ಭಾವಿಸಿ ಪ್ರಮಾದದಿಂದ ಅಥವಾ ಪ್ರೇಮದಿಂದ (ಯೋಚಿಸದೆ - ತಿಳಿಯದೆ) 'ಹೇ ಕೃಷ್ಣ ! ಹೇ ಯಾದವ ! ಹೇ ಸಖನೇ !' ಎಂಬುದಾಗಿ ಏನೇನು ಹೇಳಿದ್ದೇನೋ; ಮತ್ತು ಹೇ ಅಚ್ಯುತ ! ತಿರುಗಾಡುವಾಗ ಮಲಗಿದಾಗ - ಎದ್ದಾಗ, ನಿಂತಾಗ - ಕುಳಿತಾಗ, ಊಟ-ತಿಂಡಿ ಮಾಡುವಾಗ ಒಬ್ಬನೇ ಇರುವಾಗ ಅಥವಾ ಮಿತ್ರರುಗಳ, ಕುಟುಂಬದವೇ ಮುಂತಾದವರ ಎದುರಿಗೆ ನಾನು ವಿನೋದವಾಗಿ ಹಾಸ್ಯವಾಗಿ ನಿನ್ನಲ್ಲಿ ಅವಿನಯವಾಗಿ ನಡೆದುಕೊಂಡನೋ ಅದಕ್ಕಾಗಿ ನಾನು ಅಪ್ರಮೇಯಸ್ವರೂಪಿಯಾದ ನಿನ್ನಲ್ಲಿ ಕ್ಷಮೆಯನ್ನು ಬೇಡುತ್ತೇನೆ. ॥೪೧-೪೨॥

ನೀನೇ ಈ ಚರಾಚರ ಜಗತ್ತಿನ ತಂದೆಯಾಗಿರುವೆ, ನೀನೇ ಪೂಜನೀಯ ನಾಗಿರುವೆ ಮತ್ತು ನೀನೇ ಗುರುಗಳ ಮಹಾನ್ ಗುರುವಾಗಿರುವೆ. ಹೇ ಅಸೀಮ ಪ್ರಭಾವಶಾಲೀ ಭಗವಂತ ! ಈ ಮೂರು ಲೋಕಗಳಲ್ಲಿಯೂ ನಿನಗೆ ಸಮಾನರಾದವರು ಬೇರೆ ಯಾರೂ ಇಲ್ಲ. ಹೀಗಿರುವಾಗ ನಿನಗಿಂತ ಅಧಿ ಕರಾದವರೂ ಹೇಗೆ ಇರಲು ಸಾಧ್ಯ ! ಆದ್ದರಿಂದ ಶರೀರದಿಂದ ಉದ್ದಕ್ಕೆ ಬಿದ್ದು

ಅರ್ಥಾತ್ ಸಾಷ್ಟಾಂಗ ನಮಸ್ಕಾರ ಮಾಡಿ ಸ್ತುತಿಸಲು ಯೋಗ್ಯ ಈಶ್ವರನಾದ ನಿನಗೆ ನಾನು ಪ್ರಣಾಮ ಮಾಡಿ ಪ್ರಸನ್ನಗೊಳಿಸಲು ಇಚ್ಛಿಸುತ್ತೇನೆ. ತಂದೆ-ಮಗನ, ಮಿತ್ರನು-ಮಿತ್ರನ ಮತ್ತು ಪತಿಯು-ಪತ್ನಿಯ ಅಪರಾಧಗಳನ್ನು ಸಹಿಸಿಕೊಳ್ಳುವಂತೆ ದೇವಾ ! ನನ್ನ ಮೂಲಕ ಆದ ಅಪರಾಧಗಳನ್ನು ನೀನು ಸಹಿಸಿಕೊಳ್ಳುವ ಕೃಪೆಮಾಡು. ॥೪೨-೪೪॥

**ಆಗಲಯ್ಯಾ ! ಈಗ ನೀನು ಏನು ಇಚ್ಛಿಸುವೆ?**

ನಿನ್ನ ಇಂತಹ ಅಪೂರ್ವ ರೂಪವನ್ನು ನೋಡಿ ನಾನು ಹರ್ಷಪಡುತ್ತಲೂ ಇದ್ದೇನೆ ಮತ್ತು ಜೊತೆಗೆ ಭಯದಿಂದ ನನ್ನ ಮನಸ್ಸು ವ್ಯಾಕುಲಪಡುತ್ತಲೂ ಇದೆ. ಆದುದರಿಂದ ಹೇ ದೇವೇಶ ! ಹೇ ಜಗನ್ನಿವಾಸ ! ನೀನು ಪ್ರಸನ್ನನಾಗು ಮತ್ತು ತಲೆಯ ಮೇಲೆ ಕಿರೀಟ ಧರಿಸಿರುವ ಮತ್ತು ಕೈಗಳಲ್ಲಿ ಗದೆ, ಚಕ್ರ, ಶಂಖ ಮತ್ತು ಪದ್ಮಗಳನ್ನು ಧರಿಸಿರುವಂತಹ ನಿನ್ನ ಅದೇ ದೇವ ರೂಪ (ವಿಷ್ಣುರೂಪ)ವನ್ನು ತೋರಿಸು. ನಾನು ಈಗ ನಿನ್ನ ಆ ರೂಪವನ್ನೇ ನೋಡಲು ಇಚ್ಛಿಸುತ್ತೇನೆ. ಹೇ ಸಹಸ್ರಬಾಹು ! ಹೇ ವಿಶ್ವಮೂರ್ತಿ ! ನೀನು ಅದೇ ಚತುರ್ಭುಜದಲ್ಲಿ ಪ್ರಕಟನಾಗು. ॥೪೫-೪೬॥

ಭಗವಂತನು ಹೇಳಿದನು - ಹೇ ಅರ್ಜುನ ! ನಾನು ಬಹಳ ಪ್ರಸನ್ನನಾಗಿ ನನ್ನ ಸಾಮರ್ಥ್ಯದಿಂದ ನಿನಗೆ ಈ ಅತ್ಯಂತ ಶ್ರೇಷ್ಠ, ತೇಜೋಮಯ, ಎಲ್ಲಕ್ಕೂ ಆದಿಯಾದ ಮತ್ತು ಅನಂತ ವಿಶ್ವರೂಪವನ್ನು ತೋರಿಸಿದ್ದೇನೆ ; ಇದನ್ನು ನೀನಲ್ಲದೆ ಮೊದಲು ಯಾರೂ ಸಹ ನೋಡಿರಲಿಲ್ಲ. ॥೪೭॥

**ನಿನ್ನ ಈ ವಿಶ್ವರೂಪವನ್ನು ಮನುಷ್ಯ ಯಾವ ಸಾಧನದಿಂದ ನೋಡಲು ಸಾಧ್ಯವಾಗುತ್ತದೆ, ಪರಮಾತ್ಮಾ?**

ಯಾವ ಸಾಧನದಿಂದಲೂ ಇಲ್ಲ, ಎಲೈ ಕುರುಪ್ರವೀರ ! ಮಾನವ ಲೋಕದಲ್ಲಿ ನಿನ್ನಂತಹ ಕೃಪಾಪಾತ್ರನಿಗಲ್ಲದೆ ಈ ರೀತಿಯ ರೂಪವನ್ನು ವೇದಾಧ್ಯಯನ, ಯಜ್ಞ, ದಾನ, ಉಗ್ರ ತಪಸ್ಸು ಮತ್ತು ದೊಡ್ಡ ದೊಡ್ಡ ಕ್ರಿಯೆಗಳಿಂದಲೂ ಸಹ ಯಾರೂ ನೋಡಲಾರರು. ॥೪೮॥

**ಆದರೆ ಪರಮಾತ್ಮಾ ! ಈಗಲಾದರೋ ನಾನು ನಿನ್ನ ಘೋರರೂಪವನ್ನು ನೋಡಿ ಬಹಳ ಭಯಭೀತನಾಗುತ್ತಿದ್ದೇನೆ; ಏನು ಮಾಡಲಿ?**

ಅಯ್ಯಾ ! ನನ್ನ ಇಂತಹ ಘೋರ ರೂಪವನ್ನು ನೋಡಿ ನೀನು ಭಯಭೀತನಾಗಬಾರದು ಮತ್ತು ನಿನ್ನಲ್ಲಿ ವಿಮೂಢಭಾವವೂ (ಮೋಹ) ಸಹ ಉಂಟಾಗಬಾರದು. ಈಗ ನೀನು ಭಯವಿಲ್ಲದವನಾಗಿ ಮತ್ತು ಪ್ರಸನ್ನ ಮನಸ್ಸುಳ್ಳವನಾಗಿ ನನ್ನ ಅದೇ ರೂಪವನ್ನು ಪುನಃ ನೋಡು. ॥೪೯॥

**ಸಂಜಯ ! ಭಗವಂತನು ಆ ರೀತಿ ಹೇಳಿ ಅರ್ಜುನನಿಗೆ ಎಂತಹ ರೂಪವನ್ನು ತೋರಿಸಿದನು?**

ಸಂಜಯ ಹೇಳಿದನು - ಹೀಗೆ ಹೇಳಿ ಭಗವಾನ್ ವಾಸುದೇವನು ಅರ್ಜುನನಿಗೆ ತನ್ನ ಚತುರ್ಭುಜ ರೂಪವನ್ನು ತೋರಿಸಿದನು. ತದನಂತರ ಭಗವಂತನು ಪುನಃ ದ್ವಿಭುಜಗಳ ಸೌಮ್ಯರೂಪಿಯಾಗಿ ಭಯಭೀತನಾಗಿದ್ದ ಅರ್ಜುನನಿಗೆ ಆಶ್ವಾಸನೆಕೊಟ್ಟನು (ಸಮಾಧಾನ ಪಡಿಸಿದನು). ॥೫೦॥

**ಈಗ ನಿನ್ನ ಭಯ ದೂರವಾಗಿ ಹೋಯಿತಲ್ಲವೇ ಅರ್ಜುನ?**

ಅರ್ಜುನ ಹೇಳಿದನು - ಹೇ ಜನಾರ್ದನ ! ನಿನ್ನ ಈ ಸೌಮ್ಯವಾದ ಮನುಷ್ಯರೂಪವನ್ನು ನೋಡಿ ಈಗ ನಾನು ಸ್ಥಿರಚಿತ್ತವುಳ್ಳವನಾದೆನು ಮತ್ತು ನನ್ನ ಸ್ವಾಭಾವಿಕ ಸ್ಥಿತಿಗೆ ಬಂದೆನು. ॥೫೧॥

ಪರಮಾತ್ಮ ಹೇಳಿದನು - ನೀನು ನೋಡಿದ ನನ್ನ ಈ ಚತುರ್ಭುಜ ರೂಪದ ದರ್ಶನ ಅತ್ಯಂತ ದುರ್ಲಭವಾದುದು, ದೇವತೆಗಳೂ ಸಹ ಈ ರೂಪವನ್ನು ನೋಡುವುದಕ್ಕೆ ನಿತ್ಯವೂ ಆಸೆಪಡುತ್ತಾರೆ. ನೀನು ನನ್ನನ್ನು ನೋಡಿರುವಂತೆ ನನ್ನನ್ನು ವೇದಗಳಿಂದ, ತಪಸ್ಸಿನಿಂದ, ದಾನದಿಂದ ಮತ್ತು ಯಜ್ಞದಿಂದಲೂ ಸಹ ನೋಡಲು ಸಾಧ್ಯವಿಲ್ಲ. ॥೫೨-೫೩॥

**ಹಾಗಾದರೆ ನಿನ್ನನ್ನು ಹೇಗೆ ನೋಡಬಹುದು?**

ಎಲೈ ಶತ್ರುತಾಪನ ಅರ್ಜುನ ! ಈ ಪ್ರಕಾರ ಚತುರ್ಭುಜ ರೂಪವುಳ್ಳ ನಾನು ಅನನ್ಯ ಭಕ್ತಿಯ ಮೂಲಕವೇ ದರ್ಶನ ಕೊಡಬಲ್ಲೆನು. ಕೇವಲ ದರ್ಶನ ಕೊಡುವುದೇ ಅಲ್ಲ, ಪ್ರತಿಯಾಗಿ ತತ್ತ್ವದಿಂದ ತಿಳಿಯಲೂ ಸಹ ಸಾಧ್ಯನು ಮತ್ತು ಸಾಕ್ಷಾತ್ಕಾರ ಮಾಡಿಕೊಳ್ಳಲೂ ಸಹ ಸಾಧ್ಯನಾಗುತ್ತೇನೆ ॥೫೪॥

**ಪರಮಾತ್ಮಾ ! ಆ ಅನನ್ಯ ಭಕ್ತಿ ಹೇಗೆ ಉಂಟಾಗುತ್ತದೆ?**

ಹೇ ಪಾಂಡವ ! ಎಲ್ಲಾ ಕರ್ಮಗಳನ್ನೂ ನನಗಾಗಿಯೇ ಮಾಡುವುದು, ನನ್ನಲ್ಲೇ ಪರಾಯಣನಾಗುವುದು, ನನ್ನ ಭಕ್ತನೇ ಆಗುವುದು, ಆಸಕ್ತಿಯಿಲ್ಲದವನಾಗುವುದು ಮತ್ತು ಯಾವ ಪ್ರಾಣಿಯಲ್ಲೂ ವೈರತ್ವ ಇಟ್ಟುಕೊಳ್ಳದಿರುವುದು - ಇಂತಹ ಭಕ್ತಿಯಿಂದ ಕೂಡಿದ ಭಕ್ತನು ನನ್ನನ್ನು ಪಡೆದುಕೊಳ್ಳುತ್ತಾನೆ ॥೫೫॥

□□

# ಹನ್ನೆರಡನೇ ಅಧ್ಯಾಯವು

**ಅರ್ಜುನ ಹೇಳಿದನು - ಈಗ ನೀನು ಹೇಳಿರುವಂತೆ, ಕೆಲವರಾದರೋ ನಿರಂತರ ನಿನ್ನಲ್ಲಿಯೇ ತೊಡಗಿದ್ದು ನಿನ್ನ (ಸಗುಣ ಸಾಕಾರ) ಉಪಾಸನೆ ಮಾಡುತ್ತಾರೆ ಮತ್ತು ಕೆಲವರು ನಿನ್ನ ಅಕ್ಷರ ಅವ್ಯಕ್ತ ರೂಪ (ನಿರ್ಗುಣ - ನಿರಾಕಾರ)ದ ಉಪಾಸನೆ ಮಾಡುತ್ತಾರೆ. ಆ ಎರಡು ಪ್ರಕಾರದ ಉಪಾಸಕರಲ್ಲಿ ಯಾವ ಉಪಾಸಕರು ಶ್ರೇಷ್ಠರು? ॥೧॥**

ಭಗವಂತ ಹೇಳಿದನು - ನನ್ನಲ್ಲಿಯೇ ಮನಸ್ಸನ್ನು ತೊಡಗಿಸಿ ನಿತ್ಯ ನಿರಂತರ ನನ್ನಲ್ಲಿಯೇ ತಲ್ಲೀನರಾಗಿರುವ ಯಾವ ಭಕ್ತರು ಪರಮ ಶ್ರದ್ಧೆಯುಳ್ಳವರಾಗಿ ನನ್ನ ಉಪಾಸನೆ ಮಾಡುತ್ತಾರೆಯೋ, ಅವರನ್ನು ನಾನು ಸರ್ವಶ್ರೇಷ್ಠ ಉಪಾಸಕರೆಂದು ಭಾವಿಸುತ್ತೇನೆ. ॥೨॥

**ಆದರೆ ಯಾರು ನಿನ್ನ ಅವ್ಯಕ್ತ ರೂಪದ ಉಪಾಸನೆ ಮಾಡುತ್ತಾರೆಯೋ, ಅವರನ್ನು?**

ಸರ್ವತ್ರ ಸಮಬುದ್ಧಿಯುಳ್ಳ ಮತ್ತು ಸಕಲ ಪ್ರಾಣಿಗಳ ಹಿತದಲ್ಲಿ ನಿರತನಾಗಿರುವ ಯಾವ ಮನುಷ್ಯರು ತಮ್ಮ ಇಂದ್ರಿಯಗಳನ್ನು ಸಂಯಮ ಮಾಡಿಕೊಂಡು, ಎಲ್ಲ ಕಡೆಗಳಲ್ಲಿ ಪರಿಪೂರ್ಣ, ಅಚಿಂತ್ಯ, ಕೂಟಸ್ಥ ಅಚಲ, ಅನಿರ್ದೇಶ್ಯ, ಶಾಶ್ವತ, ಅಕ್ಷರ ಮತ್ತು ಅವ್ಯಕ್ತದ ಉಪಾಸನೆ ಮಾಡುತ್ತಾರೆಯೋ, ಅವರೂ ಸಹ ನನ್ನನ್ನೇ ಪಡೆದುಕೊಳ್ಳುತ್ತಾರೆ. ॥೩-೪॥

**ಹಾಗಾದರೆ, ಪರಮಾತ್ಮಾ! ನಿನ್ನಲ್ಲಿ ಭಕ್ತಿಯುಳ್ಳವರು ಹೇಗೆ ಶ್ರೇಷ್ಠರಾದರು?**

ಅವ್ಯಕ್ತದಲ್ಲಿ ಆಸಕ್ತಿಯುಳ್ಳ ಮನಸ್ಸಿನವರಾದ ಯಾವ ಮನುಷ್ಯರು ಅವ್ಯಕ್ತ ಸ್ವರೂಪಿಯ ಉಪಾಸನೆ ಮಾಡುತ್ತಾರೆಯೋ, ಅವರಿಗೆ ತಮ್ಮ ಸಾಧನೆಯಲ್ಲಿ ಹೆಚ್ಚು ಕಷ್ಟ ಉಂಟಾಗುತ್ತದೆ; ಏಕೆಂದರೆ ದೇಹಾಭಿಮಾನಿಯಾದವರಿಗೆ ಅವ್ಯಕ್ತದ ಪ್ರಾಪ್ತಿಯು ಬಹಳ ಕಠಿನತೆಯಿಂದ ಉಂಟಾಗುತ್ತದೆ. ಆದರೆ ಯಾರು ಎಲ್ಲಾ ಕರ್ಮಗಳನ್ನು ನನ್ನಲ್ಲಿ ಸಮರ್ಪಿಸಿ ನನ್ನ ಪರಾಯಣರಾಗಿದ್ದಾರೆಯೋ ಮತ್ತು ಅನನ್ಯ ಭಾವದಿಂದ ನನ್ನನ್ನೇ ಧ್ಯಾನ ಮಾಡುತ್ತಾ ನನ್ನ ಉಪಾಸನೆ

ಮಾಡುತ್ತಾರೆಯೋ, ಎಲೈ ಪಾರ್ಥ ! ನನ್ನಲ್ಲಿ ತನ್ಮಯವಾಗಿರುವ ಚಿತ್ತವುಳ್ಳ ಆ ಭಕ್ತರನ್ನು ನಾನು ಸ್ವತಃ ಮೃತ್ಯುರೂಪೀ ಸಂಸಾರ ಸಾಗರದಿಂದ ಬಹುಬೇಗ ಉದ್ಧಾರ ಮಾಡುವವನಾಗುತ್ತೇನೆ. ॥೫-೭॥

**ಶ್ರೀಕೃಷ್ಣ! ನಾನು ಅಂತಹ ಭಕ್ತ ಹೇಗೆ ಆಗಬಲ್ಲೆ?**

ನೀನು ನನ್ನಲ್ಲಿಯೇ ಮನಸ್ಸನ್ನು ತೊಡಗಿಸು ಮತ್ತು ನನ್ನಲ್ಲಿಯೇ ಬುದ್ಧಿಯನ್ನು ತೊಡಗಿಸು. ನನ್ನಲ್ಲಿಯೇ ಮನಸ್ಸು ಬುದ್ಧಿಗಳನ್ನು ತೊಡಗಿಸಿದ ನಂತರ ನೀನು ನನ್ನಲ್ಲಿಯೇ ನೆಲೆಸುವೆ, ಇದರಲ್ಲಿ ಸಂಶಯವೇ ಇಲ್ಲ. ಒಂದು ವೇಳೆ ಈ ರೀತಿ ಮನಸ್ಸು-ಬುದ್ಧಿಗಳನ್ನು ನನ್ನಲ್ಲಿ ಸ್ಥಿರಗೊಳಿಸಲು ನೀನು ಅಸಮರ್ಥನಾದರೆ, ಎಲೈ ಧನಂಜಯ! ನೀನು ಅಭ್ಯಾಸ ಯೋಗದ ಮೂಲಕ ನನ್ನ ಪ್ರಾಪ್ತಿಯನ್ನು ಇಚ್ಛಿಸು. ನೀನು ಅಭ್ಯಾಸ ಯೋಗದಲ್ಲಿಯೂ ಸಹ ಅಸಮರ್ಥನಾದರೆ ನನಗಾಗಿ ಕರ್ಮಮಾಡಲು ಪರಾಯಣನಾಗಿಬಿಡು. ನನಗೋಸ್ಕರ ಕರ್ಮ ಮಾಡುವುದರಿಂದಲೂ ಸಹ ನೀನು ಸಿದ್ಧಿಯನ್ನು ಪಡೆದುಕೊಳ್ಳುವೆ. ನೀನು ನನಗಾಗಿ ಕರ್ಮಮಾಡುವುದರಲ್ಲಿಯೂ ಸಹ ಅಸಮರ್ಥನಾದರೆ ಮನಸ್ಸು ಬುದ್ಧಿಗಳನ್ನು ವಶದಲ್ಲಿ ಇಟ್ಟುಕೊಳ್ಳುತ್ತಾ ಎಲ್ಲಾ ಕರ್ಮಗಳ ಫಲವನ್ನು ತ್ಯಾಗ ಮಾಡು. ॥೮-೧೧॥

**ಈ ಕ್ರಮದಿಂದ ಕರ್ಮಗಳ ಫಲವನ್ನು ತ್ಯಾಗಮಾಡುವುದು ನಾಲ್ಕನೇಯದಾದ ಬಹು ಕೀಳಾದ ಸಾಧನವಾಗಲಿಲ್ಲವೇ, ಪರಮಾತ್ಮಾ?**

ಇಲ್ಲಾ, ಯೋಗ (ಸಮತೆ)ರಹಿತ ಅಭ್ಯಾಸಕ್ಕಿಂತ ಶಾಸ್ತ್ರೀಯ ಜ್ಞಾನಶ್ರೇಷ್ಠ, ಯೋಗರಹಿತ ಶಾಸ್ತ್ರೀಯ ಜ್ಞಾನಕ್ಕಿಂತ ಧ್ಯಾನವು ಶ್ರೇಷ್ಠ ಮತ್ತು ಯೋಗರಹಿತ ಧ್ಯಾನಕ್ಕಿಂತ ಕರ್ಮಗಳ ಫಲದ ತ್ಯಾಗ ಮಾಡುವುದು ಶ್ರೇಷ್ಠವಾಗಿದೆ; ಏಕೆಂದರೆ ತ್ಯಾಗದಿಂದ ತತ್ಕಾಲದಲ್ಲಿಯೇ ಪರಮಶಾಂತಿ ಪ್ರಾಪ್ತಿಯಾಗುತ್ತದೆ. ॥೧೨॥

**ಪರಮಾತ್ಮಾ! ಮೇಲೆ ಹೇಳಿದ ನಾಲ್ಕು ಸಾಧನೆಗಳಲ್ಲಿನ ಯಾವುದಾದರೂ ಒಂದು ಸಾಧನೆಯಿಂದ ನಿನ್ನನ್ನು ಪಡೆದ ಸಿದ್ಧ ಭಕ್ತನ ಲಕ್ಷಣಗಳೇನು ಅರ್ಥಾತ್ ಅವನಲ್ಲಿ ಯಾವ-ಯಾವ ಗುಣಗಳಿರುತ್ತವೆ?**

ಅವನಿಗೆ ಯಾವುದೇ ಪ್ರಾಣಿಯಲ್ಲಿಯೂ ದ್ವೇಷವಿರುವುದಿಲ್ಲ, ಇಷ್ಟೇ ಅಲ್ಲ ಅವನಿಗೆ ಎಲ್ಲಾ ಪ್ರಾಣಿಗಳೊಡನೆ ಮಿತ್ರತೆ (ಪ್ರೇಮ) ಮತ್ತು ಎಲ್ಲರ ಮೇಲೆ ಕರುಣೆ (ದಯಾಳುತ್ವ) ಇರುತ್ತದೆ. ಅವನು ಅಹಂತೆ ಮತ್ತು ಮಮತೆಯಿಂದ ರಹಿತ ಕ್ಷಮಾಶೀಲ ಹಾಗೂ ಸುಖ-ದುಃಖಗಳಲ್ಲಿ ಸಮಾನವಾಗಿರುತ್ತಾನೆ. ಅವನು ಪ್ರತಿಯೊಂದು ಪರಿಸ್ಥಿತಿಯಲ್ಲಿಯೂ ನಿರಂತರ ಸಂತುಷ್ಟನಾಗಿರುತ್ತಾನೆ. ಶರೀರ

ಇಂದ್ರಿಯಗಳು, ಮನಸ್ಸು ಇತ್ಯಾದಿಗಳೆಲ್ಲವೂ ಅವನ ವಶದಲ್ಲಿರುತ್ತವೆ. ಅವನ ಮನಸ್ಸು ಬುದ್ಧಿಗಳು ನನಗೇ ಅರ್ಪಿತವಾಗಿರುತ್ತವೆ. ಇಂತಹ ಆ ದೃಢ ನಿಶ್ಚಯಿಯಾದ ಭಕ್ತನು ನನಗೆ ಪ್ರಿಯನಾಗಿದ್ದಾನೆ. ॥೧೩-೧೪॥

**ಮತ್ತೆ ಯಾರು ನಿನಗೆ ಪ್ರಿಯರು?**

ಯಾವ ಭಕ್ತರಿಂದ ಇತರರು ಉದ್ವೇಗಗೊಳ್ಳುವುದಿಲ್ಲವೋ ಮತ್ತು ಸ್ವತಃ ತಾನೂ ಸಹ ಇತರರಿಂದ ಉದ್ವೇಗಕ್ಕೊಳಪಡುವುದಿಲ್ಲವೋ, ಅಂತಹ ಹರ್ಷ, ಅಸೂಯೆ, ಭಯ ಮತ್ತು ಉದ್ವೇಗಗಳಿಲ್ಲದ ಭಕ್ತರು ನನಗೆ ಪ್ರಿಯರು. ॥೧೫॥

**ಪರಮಾತ್ಮಾ ! ಇನ್ನು ಯಾರು ನಿನಗೆ ಪ್ರಿಯರಾದವರು?**

ಯಾರಿಗೆ ತನಗೋಸ್ಕರ ಯಾವ ವಸ್ತು, ವ್ಯಕ್ತಿ ಇತ್ಯಾದಿಗಳ ಆವಶ್ಯಕತೆ ಇರುವುದಿಲ್ಲವೋ, ಯಾರು ಅಂತರಂಗ - ಬಹಿರಂಗವಾಗಿ ಶುದ್ಧವಾಗಿರುವರೋ, ಯಾರು ದಕ್ಷನೋ (ಚತುರನೋ) ಅರ್ಥಾತ್ ಯಾರಿಗೆ ಮನುಷ್ಯ ಶರೀರ ದೊರೆತಿದೆಯೋ, ಅವನು ಅದರ ಕೆಲಸವನ್ನು (ಭಗವಂತನ ಸಾಕ್ಷಾತ್ಕಾರ ಪಡೆದುಕೊಳ್ಳುವುದು) ಮಾಡಿಕೊಂಡಿದ್ದಾನೋ, ಯಾರು ಪ್ರಪಂಚದಿಂದ ವಿರಕ್ತನಾಗಿರುವನೋ, ಯಾರ ಹೃದಯದಲ್ಲಿ ಗೊಂದಲವುಂಟಾಗುವುದಿಲ್ಲವೋ ಹಾಗೂ ಯಾರು ಭೋಗ ಮತ್ತು ಸಂಗ್ರಹಕ್ಕಾಗಿ ಮಾಡಲಾಗುವ ಎಲ್ಲಾ ಕರ್ಮಗಳ ಪೂರ್ಣತ್ಯಾಗಿಯೋ, ಅಂತಹ ಭಕ್ತ ನನಗೆ ಪ್ರಿಯನು. ॥೧೬॥

**ಮತ್ತೆ ಇನ್ನೂ ಯಾರು ನಿನಗೆ ಪ್ರಿಯರು?**

ಯಾರು ಅನುಕೂಲತೆ ಒದಗಿಬಂದಾಗ ಸಂತೋಷ ಪಡುವುದಿಲ್ಲವೋ ಮತ್ತು ಅನಾನುಕೂಲತೆ ಉಂಟಾದಾಗ ದ್ವೇಷ ಮಾಡುವುದಿಲ್ಲವೋ ಹಾಗೂ ದುಃಖಕರ ಪರಿಸ್ಥಿತಿಯಲ್ಲಿ ಯಾರು ಶೋಕಪಡುವುದಿಲ್ಲವೋ ಮತ್ತು ಸುಖಕರ ಪರಿಸ್ಥಿತಿಯನ್ನು ಬಯಸುವುದಿಲ್ಲವೋ ಹಾಗೂ ಯಾರು ಶುಭ-ಅಶುಭ ಕರ್ಮಗಳಲ್ಲಿ ರಾಗ-ದ್ವೇಷಗಳ ತ್ಯಾಗಿಯಾಗಿದ್ದಾನೋ, ಅಂತಹ ಭಕ್ತನು ನನಗೆ ಪ್ರಿಯನು ॥೧೭॥

**ಪರಮಾತ್ಮಾ ! ನಿನಗೆ ಪ್ರಿಯರಾದವರು ಇನ್ನು ಯಾರು ?**

ಯಾರು ಶತ್ರು - ಮಿತ್ರ, ಮಾನ - ಅಪಮಾನ, ಅನುಕೂಲತೆ - ಪ್ರತಿಕೂಲತೆ ಮತ್ತು ಸುಖ-ದುಃಖಗಳಲ್ಲಿ ಸಮಾನವಾಗಿರುವನೋ ಮತ್ತು ಸಂಸಾರದಲ್ಲಿ ಆಸಕ್ತಿ ಯಿಲ್ಲದವನೋ, ಯಾರು ಹೊಗಳಿಕೆ - ತೆಗಳಿಕೆಗಳನ್ನು ಸಮಾನವಾಗಿ ತಿಳಿದು ಕೊಳ್ಳುವನೋ, ಯಾರು ಮನನಶೀಲನೋ, ಯಾರು ಯಾವ ಪ್ರಕಾರ ದಿಂದಲಾದರೂ ಶರೀರ ನಿರ್ವಾಹವಾಗುವುದರಲ್ಲಿಯೇ ಸಂತುಷ್ಟನಾಗಿರುವನೋ,

ಯಾರು ವಾಸಸ್ಥಳ ಹಾಗೂ ಶರೀರದಲ್ಲಿಯೂ ಸಹ ಮಮತೆ-ಆಸಕ್ತಿಗಳಿಲ್ಲದವನೋ ಮತ್ತು ಯಾರು ಸ್ಥಿರ-ಬುದ್ಧಿಯುಳ್ಳವನೋ, ಅಂತಹ ಭಕ್ತ ನನಗೆ ಪ್ರಿಯನಾಗಿರುತ್ತಾನೆ.* ॥೧೮-೧೯॥

**ಇದುವರೆಗೂ ನೀನು ನಿನ್ನ ಸಿದ್ಧ ಭಕ್ತರನ್ನು ಪ್ರಿಯರೆಂದು ತಿಳಿಸಿದೆ, ಈಗ ನಿನಗೆ ಅತ್ಯಂತ ಪ್ರಿಯರಾದವರು ಯಾರು? - ಎಂಬುದನ್ನು ತಿಳಿಸು.**

ಯಾರು ಶ್ರದ್ಧಾ - ಪ್ರೇಮಪೂರ್ವಕವಾಗಿ ನನ್ನ ಪರಾಯಣರಾಗಿದ್ದಾರೆಯೋ ಮತ್ತು ಈಗತಾನೇ ಹೇಳಿರುವ ಸಿದ್ಧ ಭಕ್ತರ ಲಕ್ಷಣಗಳನ್ನು ಅಭಿರುಚಿಯಿಂದ ಸೇವಿಸುವರೋ, ಅಂತಹ ಸಾಧಕ ಭಕ್ತರು ನನಗೆ ಅತ್ಯಂತ ಪ್ರಿಯರಾಗಿದ್ದಾರೆ. ॥೨೦॥

❑❑

* ಇಲ್ಲಿಯವರೆಗೆ ಐದು ಪ್ರಕಾರದ ಸಿದ್ಧ ಭಕ್ತರ ಲಕ್ಷಣಗಳ ವರ್ಣನೆಯಾಗಿದೆ. ಐದು ಬಗೆಯ ಭಕ್ತರ ಬೇರೆ-ಬೇರೆ ಲಕ್ಷಣಗಳನ್ನು ತಿಳಿಸುವುದರ ತಾತ್ಪರ್ಯ ಹೀಗಿದೆ - ಭಕ್ತರ ಸ್ವಭಾವ, ಅವರ ಸಾಧನ ಪದ್ಧತಿಗಳು ಬೇರೆ ಬೇರೆಯಾಗಿರುತ್ತವೆ. ಆದುದರಿಂದ ಕೆಲವು ಭಕ್ತರಲ್ಲಿ ಮುಖ್ಯ ರೂಪದಿಂದ ಯಾವುದಾದರೂ ಲಕ್ಷಣ ಅನ್ವಯಿಸುತ್ತದೆಯಾದರೆ ಕೆಲವರಲ್ಲಿ ಇನ್ನಾವುದಾದರೂ ಲಕ್ಷಣ ಅನ್ವಯಿಸುತ್ತದೆ; ಆದರೆ ಪ್ರಪಂಚದ ಸಂಬಂಧದ ತ್ಯಾಗ ಮತ್ತು ಭಗವಂತನಲ್ಲಿ ಪ್ರೇಮ ಎಲ್ಲರಲ್ಲೂ ಸಮಾನವಾಗಿಯೇ ಇರುತ್ತವೆ.

# ಹದಿಮೂರನೇ ಅಧ್ಯಾಯವು

ನಿನ್ನ (ಸಗುಣ-ಸಾಕಾರ ರೂಪದ) ಉಪಾಸನೆ ಮಾಡುವವರಾದರೋ ನಿನಗೆ ಅತ್ಯಂತ ಪ್ರಿಯರಾಗುತ್ತಾರೆ ; ಯಾರು ನಿನ್ನ ನಿರ್ಗುಣ - ನಿರಾಕಾರ ರೂಪದ ಉಪಾಸನೆ ಮಾಡುತ್ತಾರೆಯೋ, ಅವರು ಹೇಗಿರುತ್ತಾರೆ? - ಎಂಬುದನ್ನು ಈಗ ತಿಳಿಸು.

ಅಯ್ಯಾ ! ಅವರು ವಿವೇಕಿಗಳಾಗುತ್ತಾರೆ.

**ಪರಮಾತ್ಮಾ ! ಯಾವುದರ ವಿವೇಕವುಂಟಾಗುತ್ತದೆ ?**

ಕ್ಷೇತ್ರ ಮತ್ತು ಕ್ಷೇತ್ರಜ್ಞನ, ಎಲೈ ಕುಂತೀಪುತ್ರ ಅರ್ಜುನ ! ಈ ರೂಪದಿಂದ ಹೇಳುವ ಶರೀರವನ್ನು 'ಕ್ಷೇತ್ರ' ಎಂದು ಹೇಳುತ್ತಾರೆ ಮತ್ತು ಯಾರು ಈ ಕ್ಷೇತ್ರವನ್ನು ತಿಳಿದುಕೊಂಡಿದ್ದಾರೆಯೋ, ಅವನನ್ನು ಜ್ಞಾನಿಗಳು 'ಕ್ಷೇತ್ರಜ್ಞ' (ಶರೀರಿ) ಎಂದು ಹೇಳುತ್ತಾರೆ. ॥೧॥

**ಆ ಕ್ಷೇತ್ರಜ್ಞನ ಸ್ವರೂಪ ಯಾವುದು?**

ಎಲೈ ಭಾರತ ! ಸಮಸ್ತ ಕ್ಷೇತ್ರ (ಶರೀರ)ಗಳಲ್ಲಿ ಕ್ಷೇತ್ರಜ್ಞನ (ಶರೀರಿಯ) ರೂಪದಿಂದ ನಾನೇ ಇದ್ದೇನೆ - ಎಂಬುದಾಗಿ ನೀನು ತಿಳಿದುಕೋ.*

**ಪರಮಾತ್ಮಾ ! ತಿಳಿದುಕೊಳ್ಳುವುದೆಂದರೇನು?**

ಕ್ಷೇತ್ರ ಬೇರೆ ಮತ್ತು ಕ್ಷೇತ್ರಜ್ಞಬೇರೆ -ಇದನ್ನು ಸರಿಯಾಗಿ ತಿಳಿದುಕೊಳ್ಳುವುದೇ ನನ್ನ ಅಭಿಪ್ರಾಯದಲ್ಲಿ ಜ್ಞಾನವಾಗಿದೆ. ಅಂದರೆ ಕ್ಷೇತ್ರಕ್ಕೆ ಪ್ರಪಂಚದೊಡನೆಯೂ ಮತ್ತು ಕ್ಷೇತ್ರಜ್ಞನಿಗೆ ನನ್ನೊಡನೆಯೂ ಏಕತೆಯಿದೆ - ಇದನ್ನು ಸರಿಯಾಗಿ ಅನುಭವಮಾಡಿಕೊಳ್ಳುವುದೇ ನನ್ನ ಅಭಿಪ್ರಾಯದಲ್ಲಿ ಜ್ಞಾನವಾಗಿದೆ. ॥೨॥

---

* ಇಲ್ಲಿ 'ಸಮಸ್ತ ಕ್ಷೇತ್ರಗಳಲ್ಲಿ ನನ್ನನ್ನೇ ಕ್ಷೇತ್ರಜ್ಞನೆಂದು ತಿಳಿ' - ಎಂಬುದಾಗಿ ಹೇಳುವುದರ ತಾತ್ಪರ್ಯ ಹೀಗಿದೆ - ಈ ಶರೀರವಾದರೋ ಪ್ರಕೃತಿಯ ಅಂಶವಾಗಿದೆ. ಆದುದರಿಂದ ನೀನು ಇದರಿಂದ ಪೂರ್ಣವಾಗಿ ವಿಮುಖನಾಗಿಬಿಡು ಮತ್ತು ನೀನು ನನ್ನ ಅಂಶನಾಗಿರುವೆ. ಆದುದರಿಂದ ನೀನು ಪೂರ್ಣವಾಗಿ ನನ್ನ ಸಮ್ಮುಖನಾಗು. ಮತ್ತೊಂದು ತಾತ್ಪರ್ಯ ಈ ರೀತಿಯಾಗಿದೆ - ನೀನು ಕ್ಷೇತ್ರ (ಶರೀರ)ದೊಡನೆ ನಿನ್ನ ಸಂಬಂಧವನ್ನು ಸ್ವೀಕಾರಮಾಡಿಕೊಂಡಿರುವಲ್ಲಿ ನನ್ನೊಡನೆ ನಿನ್ನ ಸಂಬಂಧವನ್ನು ಸ್ವೀಕಾರಮಾಡಿಕೋ; ಏಕೆಂದರೆ ವಾಸ್ತವವಾಗಿಯೂ ಶರೀರದೊಡನೆ ನಿನ್ನ ಏಕತೆ ಇಲ್ಲವೇ ಇಲ್ಲ, ಮತ್ತು ನನ್ನೊಡನೆ ನಿನ್ನ ಸ್ವತಃ ಸಿದ್ಧವಾದ ಏಕತೆ ಇದೆ. ಇದನ್ನು ನೀನು ತಿಳಿದುಕೊ.

**ಕ್ಷೇತ್ರ ಮತ್ತು ಕ್ಷೇತ್ರಜ್ಞ ಇವುಗಳ ಜ್ಞಾನಕ್ಕಾಗಿ ಯಾವ ಮಾತುಗಳು ತಿಳಿದುಕೊಳ್ಳುವುದು ಆವಶ್ಯಕವಾಗುತ್ತವೆ?**

ಆರು ಮಾತುಗಳನ್ನು ತಿಳಿಯುವುದು ಆವಶ್ಯವಿದೆ - ಕ್ಷೇತ್ರದ ವಿಷಯದಲ್ಲಿ ನಾಲ್ಕು ಮತ್ತು ಕ್ಷೇತ್ರಜ್ಞನ ವಿಷಯದಲ್ಲಿ ಎರಡು. ಆ 'ಕ್ಷೇತ್ರ' ಯಾವುದು, ಹೇಗಿದೆ, ಯಾವ ವಿಕಾರಗಳುಳ್ಳದ್ದು ಮತ್ತು ಯಾವುದರಿಂದ ಉತ್ಪತ್ತಿಯಾಗಿದೆ ಹಾಗೂ ಆ 'ಕ್ಷೇತ್ರಜ್ಞ' ಯಾರು ಮತ್ತು ಯಾವ ಪ್ರಭಾವವುಳ್ಳವನು, ಅದೆಲ್ಲವನ್ನೂ ಸಂಕ್ಷೇಪವಾಗಿ ನೀನು ನನ್ನಿಂದ ಕೇಳು. ॥೩॥

**ಭಗವಂತ ! ಇದರ ವಿಸ್ತಾರವಾದ ವರ್ಣನೆ ಎಲ್ಲಿದೆ?**

ಋಷಿಗಳು, ವೇದಗಳ ಋಕ್ಕುಗಳು (ವೇದಮಂತ್ರ) ಮತ್ತು ಯುಕ್ತಿ-ಯುಕ್ತ ಹಾಗೂ ನಿಶ್ಚಯಿಸಲ್ಪಟ್ಟ ಬ್ರಹ್ಮ ಸೂತ್ರದ ಪದಗಳು ಇದನ್ನು ವಿಸ್ತಾರವಾಗಿ, ಬೇರೆ ಬೇರೆಯಾಗಿ ಹೇಳಿವೆ. ॥೪॥

**ಆ ಕ್ಷೇತ್ರ ಅಂದರೆ ಏನು?**

ಮೂಲ ಪ್ರಕೃತಿ, ಸಮಷ್ಟಿ ಬುದ್ಧಿ (ಮಹತ್ತತ್ತ್ವ), ಸಮಷ್ಟಿ ಅಹಂಕಾರ, ಐದು ಮಹಾಭೂತಗಳು, ಹತ್ತು ಇಂದ್ರಿಯಗಳು, ಒಂದು ಮನಸ್ಸು ಮತ್ತು ಇಂದ್ರಿಯಗಳ ಐದು ವಿಷಯಗಳು - ಇದು ಇಪ್ಪತ್ನಾಲ್ಕು ತತ್ತ್ವಗಳುಳ್ಳ ಕ್ಷೇತ್ರವಾಗಿದೆ.* ॥೫॥

**ಆ ಕ್ಷೇತ್ರವು ಯಾವ ವಿಕಾರಗಳುಳ್ಳದ್ದು?**

ಇಚ್ಛಾ, ದ್ವೇಷ, ಸುಖ, ದುಃಖ, ಶರೀರ, ಪ್ರಾಣಶಕ್ತಿ ಮತ್ತು ಧಾರಣ ಶಕ್ತಿ -ಈ ಏಳು ವಿಕಾರಗಳ ಸಹಿತ ಈ ಕ್ಷೇತ್ರವನ್ನು ನಾನು ಸಂಕ್ಷೇಪವಾಗಿ ಹೇಳಿದ್ದೇನೆ. ॥೬॥

* ಮೂಲ ಪ್ರಕೃತಿಯು ಎಲ್ಲಕ್ಕೂ ತಾಯಿ. ಆ ಪ್ರಕೃತಿಯಿಂದ ಬುದ್ಧಿರೂಪೀ ಪುತ್ರಿ ಹುಟ್ಟಿದಳು. ಬುದ್ಧಿಯಿಂದ ಆಹಂಕಾರರೂಪೀ ಪುತ್ರ ಜನಿಸಿದನು. ಅಹಂಕಾರದ ಸಂತಾನವೇ - ಪೃಥ್ವಿ, ಜಲ, ತೇಜಸ್ಸು, ವಾಯು ಮತ್ತು ಆಕಾಶ - ಇವು ಪಂಚ ಮಹಾಭೂತಗಳು. ಪಂಚಮಹಾಭೂತಗಳ ಸಂತಾನವೇ ಹತ್ತು ಇಂದ್ರಿಯಗಳು, ಒಂದು ಮನಸ್ಸು ಮತ್ತು ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧ - ಇವು ಐದು ವಿಷಯ. ಇಂದ್ರಿಯಗಳು, ಮನಸ್ಸು ಮತ್ತು ಐದು ವಿಷಯಗಳಿಂದ ಯಾವ ಸಂತಾನವೂ ಹುಟ್ಟಲಿಲ್ಲ. ಆದುದರಿಂದ ಅವು ವಿಕೃತಿಗಳಾಗಿವೆ. ಇದರ ತಾತ್ಪರ್ಯ ಈ ರೀತಿಯಾಗಿದೆ - ಮೊದಲಿನ ಏಳು ಪ್ರಕೃತಿ - ವಿಕೃತಿಗಳು ಮತ್ತು ಉಳಿದ ಹದಿನಾರು ವಿಕೃತಿಗಳು.

**ಪರಮಾತ್ಮಾ ! ವಿಕಾರಗಳ ಸಹಿತವಾದ ಕ್ಷೇತ್ರವನ್ನು 'ಇದು' ಎಂಬ ರೂಪದಿಂದ (ತನ್ನಿಂದ ಬೇರೆ) ಹೇಗೆ ಕಾಣುವುದು?**

೧. ತನ್ನಲ್ಲಿ ಶ್ರೇಷ್ಠತೆಯ ಅಭಿಮಾನದ ಅಭಾವ.

೨. ತನ್ನಲ್ಲಿ ಬಾಹ್ಯ ಆಡಂಬರವಿಲ್ಲದಿರುವುದು.

೩. ಶರೀರ, ಮನಸ್ಸು ಮತ್ತು ವಾಣಿಗಳಿಂದ ಯಾರಿಗೂ ಕಿಂಚಿತ್ತೂ ಸಹ ದುಃಖವನ್ನು ಕೊಡದಿರುವುದು.

೪. ಕ್ಷಮಾ ಸ್ವಭಾವವಿರುವುದು.

೫. ಶರೀರ, ಮನಸ್ಸು ಮತ್ತು ಮಾತಿನಲ್ಲಿ ಸರಳತೆ.

೬. ಜ್ಞಾನ ಪ್ರಾಪ್ತಿಗಾಗಿ ಗುರುಗಳ ಬಳಿಗೆ ಹೋಗಿ ಅವರ ಸೇವೆ ಇತ್ಯಾದಿ ಮಾಡುವುದು.

೭. ಶರೀರ ಮತ್ತು ಅಂತಃಕರಣದ ಶುದ್ಧಿ.

೮. ತನ್ನ ಧ್ಯೇಯದಿಂದ ವಿಚಲಿತನಾಗದೇ ಇರುವುದು.

೯. ಮನಸ್ಸನ್ನು ವಶಮಾಡಿಕೊಳ್ಳುವುದು.

೧೦. ಇಂದ್ರಿಯಗಳ ವಿಷಯಗಳಿಂದ ವಿರಕ್ತನಾಗುವುದು.

೧೧. ಅಹಂಕಾರವಿಲ್ಲದಿರುವಿಕೆ

೧೨. ವೈರಾಗ್ಯಕ್ಕಾಗಿ ಜನನ, ಮರಣ, ವೃದ್ಧಾವಸ್ಥೆ ಮತ್ತು ರೋಗಗಳಲ್ಲಿ ದುಃಖರೂಪೀ ದೋಷಗಳ ಮೂಲಕಾರಣವನ್ನು ನೋಡುವುದು.

೧೩. ಆಸಕ್ತಿಯಿಲ್ಲದಿರುವುದು.

೧೪. ಹೆಂಡತಿ, ಮಕ್ಕಳು, ಮನೆ ಮುಂತಾದುವುಗಳಲ್ಲಿ ತಲ್ಲೀನನಾಗದಿರುವುದು.

೧೫. ಅನುಕೂಲ-ಪ್ರತಿಕೂಲಗಳ ಪ್ರಾಪ್ತಿಯಲ್ಲಿ ಚಿತ್ತವನ್ನು ಯಾವಾಗಲೂ ಸಮವಾಗಿಟ್ಟುಕೊಳ್ಳುವುದು.

೧೬. ಸಂಸಾರದಲ್ಲಿ ವಿರಕ್ತಿ ಮತ್ತು ನನ್ನಲ್ಲಿ ಅವ್ಯಭಿಚಾರಿಣೀ (ಅನನ್ಯ ಭಾವದ) ಭಕ್ತಿಯು ಇರುವುದು.

೧೭. ಏಕಾಂತ ಸ್ಥಳದಲ್ಲಿ ಇರುವ ಸ್ವಭಾವವಿರುವುದು.

೧೮. ಜನ-ಸಮುದಾಯದಲ್ಲಿ ಪ್ರೀತಿಯಿಲ್ಲದಿರುವುದು.

೧೯. ಪರಮಾತ್ಮನ ಅಸ್ತಿತ್ವದ ಬಗ್ಗೆ ನಿತ್ಯ-ನಿರಂತರ ಮನನ ಮಾಡುವುದು.

೨೦. ಎಲ್ಲೆಲ್ಲಿಯೂ ಪರಮಾತ್ಮನನ್ನೇ ನೋಡುವುದು.

– ಈ ಇಪ್ಪತ್ತು ಸಾಧನೆಗಳಿಂದ ಶರೀರವು 'ಇದು' ಎಂಬುದಾಗಿ ಕಾಣುವುದು, ಶರೀರವನ್ನು 'ಇದು' ಎಂಬ ರೂಪದಿಂದ (ತನ್ನಿಂದ ಬೇರೆ)ನೋಡುವುದು ಜ್ಞಾನವಾಗಿದೆ ಮತ್ತು ಇದಕ್ಕೆ ವಿರುದ್ಧವಾಗಿ ಶರೀರವನ್ನು ತನ್ನ ಸ್ವರೂಪವೆಂದು ನೋಡುವದು ಅಜ್ಞಾನವಾಗಿದೆ. ॥೭-೧೧॥

**ಈ ಜ್ಞಾನದಿಂದ ಪ್ರಾಪ್ತಿಯಾಗುವ ತತ್ತ್ವವೇನು?**

ಜ್ಞೇಯ - ತತ್ತ್ವ(ಪರಮಾತ್ಮ)ವಾಗಿದೆ. ನಾನು ಆ ಜ್ಞೇಯ - ತತ್ತ್ವದ ವರ್ಣನೆ ಮಾಡುವೆನು, ಅದನ್ನು ತಿಳಿದುಕೊಳ್ಳುವುದರಿಂದ ಅಮರತ್ವದ ಪ್ರಾಪ್ತಿ ಉಂಟಾಗುತ್ತದೆ.

**ಆ ಜ್ಞೇಯ - ತತ್ತ್ವದ ಸ್ವರೂಪವೇನು?**

ಅದು ಆದಿ - ಅಂತ್ಯ ರಹಿತವಾದ ಪರಮ ಬ್ರಹ್ಮವಾಗಿದೆ, ಅದನ್ನು ಸತ್ ಅಲ್ಲವೆಂದೂ ಹೇಳುತ್ತಾರೆ ಮತ್ತು ಅಸತ್ ಅಲ್ಲವೆಂದೂ ಹೇಳಲ್ಪಡುತ್ತದೆ.* ॥೧೨॥

**ಆದಾಗ್ಯೂ ಸಹ ಅದು ಹೇಗಿದೆ - ಪರಮಾತ್ಮಾ?**

ಅದು ಎಲ್ಲಾ ಕಡೆಗಳಲ್ಲಿಯೂ ಕೈ-ಕಾಲುಗಳುಳ್ಳದ್ದೂ, ಎಲ್ಲಾ ಕಡೆಗಳಲ್ಲಿಯೂ ಕಣ್ಣುಗಳು, ತಲೆಗಳು ಮತ್ತು ಮುಖಗಳುಳ್ಳದ್ದು ಹಾಗೂ ಎಲ್ಲೆಲ್ಲಿಯೂ ಕಿವಿಗಳುಳ್ಳದ್ದು. ಅದು ಎಲ್ಲವನ್ನೂ ವ್ಯಾಪಿಸಿಕೊಂಡು ಸ್ಥಿರವಾಗಿದೆ. ಅದು ಸಂಪೂರ್ಣವಾಗಿ ಇಂದ್ರಿಯಗಳಿಂದ ಹೊರತಾದುದು ಮತ್ತು ಎಲ್ಲಾ ಇಂದ್ರಿಯಗಳ ವಿಷಯಗಳನ್ನು ಪ್ರಕಾಶಪಡಿಸುವುದಾಗಿದೆ. ಅದು ಆಸಕ್ತಿ - ರಹಿತನಾಗಿಯೂ ಇಡೀ ಜಗತ್ತಿನ ಪಾಲನೆ - ಪೋಷಣೆ ಮಾಡುವುದಾಗಿದೆ. ಅದು ಗುಣಗಳಿಂದ ಹೊರತಾದುದು ಮತ್ತು ಗುಣಗಳ ಭೋಕ್ತಾ ಆಗಿದೆ. ॥೧೩-೧೪॥

* ಆ ತತ್ತ್ವವನ್ನು ಸತ್-ಅಸತ್ ಎರಡು ಹೇಳಲಾಗದು. ಏಕೆಂದರೆ ಅಸತ್‌ನ ಅತ್ಯಂತ ಅಭಾವವಿರುವಾಗ ಆ ಅಸತ್‌ನ ಭಾವವಿಲ್ಲದೆ (ಅಸ್ತಿತ್ವ) 'ಸತ್' ಶಬ್ದದ ಪ್ರಯೋಗವಾಗುವುದಿಲ್ಲ, ಆದುದರಿಂದ ಆ ಪರಮಾತ್ಮ ತತ್ತ್ವವನ್ನು 'ಸತ್' ಎಂದೂ ಸಹ ಹೇಳಲಾಗದು. ಆ ಪರಮಾತ್ಮ ತತ್ತ್ವಕ್ಕೆ ಎಂದಿಗೂ ಅಭಾವವೇ ಉಂಟಾಗುವುದಿಲ್ಲ, ಆದ್ದರಿಂದ ಅದನ್ನು 'ಅಸತ್' ಎಂದೂ ಸಹ ಹೇಳಲಾಗದು. ತಾತ್ಪರ್ಯವಿಷ್ಟೇ - ಆ ತತ್ತ್ವದಲ್ಲಿ ಸತ್-ಅಸತ್ ಶಬ್ದಗಳ ಅರ್ಥಾತ್ ವಾಣಿಯ ಪ್ರವೃತ್ತಿ ಉಂಟಾಗುವುದೇ ಇಲ್ಲ, ಹೀಗೆ ಅದು ನಿರಪೇಕ್ಷ ಪರಮಾತ್ಮ ತತ್ತ್ವವಾಗಿದೆ.

**ಒಂದೇ ತತ್ತ್ವದಲ್ಲಿ ಎರಡು ವಿರೋಧೀ ಲಕ್ಷಣಗಳು ಹೇಗಾದವು?**

ಅನೇಕ ವಿರೋಧೀ ಭಾವಗಳು ಆ ಒಂದರಲ್ಲಿಯೆ ಸೇರಿ ಹೋಗುತ್ತವೆ ಮತ್ತು ಅದರಲ್ಲಿ ವಿರೋಧವಿರುವುದಿಲ್ಲ; ಏಕೆಂದರೆ ಸ್ಥಾವರ - ಜಂಗಮ ಇತ್ಯಾದಿ ಸಕಲ ಪ್ರಾಣಿಗಳ ಹೊರಗೂ ಸಹ ಅದೇ ಇದೆ ಮತ್ತು ಒಳಗೂ ಸಹ ಅದೇ ಇದೆ ಹಾಗೂ ಚರ-ಅಚರ ಪ್ರಾಣಿಗಳ ರೂಪದಲ್ಲಿಯೂ ಸಹ ಅದೇ ಇದೆ ಅರ್ಥಾತ್ ಅದರ ಹೊರತಾಗಿ ಬೇರೆ ಯಾವ ಅಸ್ತಿತ್ವವೂ ಇಲ್ಲವೇ ಇಲ್ಲ. ಅತ್ಯಂತ ದೂರದಲ್ಲಿಯೂ ಸಹ ಅದೇ ಇದೆ ಮತ್ತು ಅತ್ಯಂತ ಹತ್ತಿರವೂ ಸಹ ಅದೇ ಇದೆ* ಅದು ಅತ್ಯಂತ ಸೂಕ್ಷ್ಮವಾದುದರಿಂದ ಅರಿಯಲಸಾಧ್ಯವಾಗಿದೆ ಅರ್ಥಾತ್ ಇಂದ್ರಿಯಗಳ ಮತ್ತು ಅಂತಃಕರಣದ ವಿಷಯವಲ್ಲ. ಆದುದರಿಂದ ಅದರಲ್ಲಿ ವಿರೋಧವಿಲ್ಲ. ॥೧೫॥

**ಶ್ರೀಕೃಷ್ಣ ! ಅದರಲ್ಲಿ ವಿರೋಧ ಉಂಟಾಗದೇ ಇರಲು ಇನ್ನೇನಾದರೂ ಕಾರಣವುಂಟೇ?**

ಆ ಪರಮಾತ್ಮನು ವಿಭಾಗರಹಿತನಾಗಿದ್ದರೂ ಸಹ ಅನೇಕ ವಿಭಾಗವುಳ್ಳ ಪ್ರಾಣಿಗಳಲ್ಲಿ (ವಸ್ತುಗಳಲ್ಲಿ) ವಿಭಕ್ತನ ರೀತಿಯಲ್ಲಿ ಸ್ಥಿತನಾಗಿದ್ದಾನೆ. ಆ ಪರಮಾತ್ಮನೇ ಸಕಲ ಪ್ರಾಣಿಗಳನ್ನು ಉತ್ಪತ್ತಿಮಾಡುವವನು, ಅವುಗಳ ಪಾಲನೆ - ಪೋಷಣೆ ಮಾಡುವವನು ಮತ್ತು ಸಂಹಾರ ಮಾಡುವವನೂ ಆಗಿದ್ದಾನೆ ಅರ್ಥಾತ್ ಉತ್ಪತ್ತಿ, ಸ್ಥಿತಿ ಮತ್ತು ಪ್ರಳಯರೂಪನೂ ಸಹ ಅವನೇ. ಆ ಪರಮಾತ್ಮನನ್ನು ತಿಳಿದುಕೊಳ್ಳಬೇಕು. ॥೧೬॥

**ಅವನ ಸ್ವರೂಪ ಯಾವುದು?**

ಇಂದ್ರಿಯಗಳು, ಮನಸ್ಸು, ಬುದ್ಧಿ ಇತ್ಯಾದಿಗಳ ಮೂಲಕ ಎಷ್ಟು ಜ್ಞಾನ

---

* ದೂರ ಮತ್ತು ಹತ್ತಿರ ಮೂರು ಪ್ರಕಾರದಿಂದಿವೆ - ದೇಶಕೃತ, ಕಾಲಕೃತ ಮತ್ತು ವಸ್ತುಕೃತ. ದೇಶವನ್ನು ತೆಗೆದುಕೊಂಡರೆ ದೂರಕ್ಕೆ-ದೂರ ದೇಶದಲ್ಲಿಯೂ ಅವನೇ ಇದ್ದಾನೆ ಮತ್ತು ಅತ್ಯಂತ ಸಮೀಪ ದೇಶದಲ್ಲಿಯೂ ಸಹ ಅವನೆ ಇದ್ದಾನೆ. ಕಾಲವನ್ನು ತೆಗೆದುಕೊಂಡರೆ ಅತ್ಯಂತ ಮೊದಲಿನಿಂದಲೂ ಸಹ ಅವನೇ ಇದ್ದನು, ಮುಂದೆಯೂ ಸಹ (ಭವಿಷ್ಯದಲ್ಲಿ) ಅವನೇ ಇರುವವನು ಮತ್ತು ಈಗಲೂ ಸಹ ಅವನೇ ಇದ್ದಾನೆ. ವಸ್ತುವನ್ನು ತೆಗೆದುಕೊಂಡರೆ - ಸಮಸ್ತ ವಸ್ತುಗಳ ಮೊದಲೂ ಸಹ ಅವನೇ ಇದ್ದಾನೆ. ವಸ್ತುಗಳ ಅಂತ್ಯದಲ್ಲಿಯೂ ಸಹ ಅವನೆ ಇದ್ದಾನೆ ಮತ್ತು ವಸ್ತುಗಳ ರೂಪದಲ್ಲಿ ಕೂಡಾ ಅವನೆ ಇದ್ದಾನೆ. ಆದುದರಿಂದ ಅವನು ಅತ್ಯಂತ ದೂರ ಮತ್ತು ಅತ್ಯಂತ ಸಮೀಪವಿದ್ದಾನೆ.

ಈ ಶ್ಲೋಕ ಈ ಪ್ರಕರಣದ ಸಾರವಾಗಿದೆ. ಈ ಶ್ಲೋಕದ ವಿಷಯವನ್ನು ಸರಿಯಾದ ರೀತಿಯಿಂದ ತಿಳಿದುಕೊಂಡರೆ, ಇದರ ಭಾವವನ್ನು ಮನನ ಮಾಡಿದರೆ, ಮನುಷ್ಯ ಬೇಕಾದರೆ ವ್ಯವಹಾರದಲ್ಲಿರಲಿ, ಏಕಾಂತದಲ್ಲಿ ಇರಲಿ, ಈ ಭಾವದ ಜಾಗೃತಿ ಅವನಲ್ಲಿ ಸ್ವತಃ (ಪರಿಶ್ರಮವಿಲ್ಲದೆ, ಉದ್ಯೋಗ ಮಾಡದೆ) ಇರುವುದು.

ಉಂಟಾಗುತ್ತದೆಯೋ, ಅದೆಲ್ಲವೂ ಅವನಿಂದಲೇ ಪ್ರಕಾಶಿಸಲ್ಪಡುತ್ತವೆ. ಆದುದರಿಂದ ಅವನು ಎಲ್ಲಾ ಜ್ಯೋತಿ (ಜ್ಞಾನ) ಗಳಿಗೂ ಸಹಾ ಜ್ಯೋತಿ (ಪ್ರಕಾಶಕ)ಯಾಗಿದ್ದಾನೆ ಅವನಲ್ಲಿ ಅಜ್ಞಾನದ ಅತ್ಯಂತ ಅಭಾವವಿದೆ. ಅವನು ಜ್ಞಾನಸ್ವರೂಪಿ. ತಿಳಿಯಲು ಯೋಗ್ಯನೂ ಸಹ ಅವನೇ. ಅವನು ಜ್ಞಾನ (ಸಾಧನ ಸಮುದಾಯ)ದಿಂದ ಪಡೆದುಕೊಳ್ಳಲು ಯೋಗ್ಯನಾಗಿದ್ದಾನೆ. ಅವನು ಎಲ್ಲರ ಹೃದಯದಲ್ಲಿಯೂ ವಿರಾಜಮಾನನಾಗಿದ್ದಾನೆ.* ॥೧೭॥

**ಇನ್ನು ಯಾವ -ಯಾವುದನ್ನು ತಿಳಿಯಬೇಕು ಮತ್ತು ತಿಳಿದುಕೊಳ್ಳುವುದರ ಮಹತ್ತ್ವವೇನು? ಭಗವಂತ !**

ಕ್ಷೇತ್ರ, ಜ್ಞಾನ ಮತ್ತು ಜ್ಞೇಯ - ಈ ಮೂರನ್ನು ತಿಳಿಯಬೇಕು ; ನಾನು ಅವುಗಳನ್ನು ಸಂಕ್ಷೇಪವಾಗಿ ವರ್ಣಿಸಿಬಿಟ್ಟಿದ್ದೇನೆ. ಈ ಮೂರನ್ನು ಸರಿಯಾಗಿ ತಿಳಿದ ನನ್ನ ಭಕ್ತನು ನನ್ನ ಭಾವವನ್ನು ಪಡೆಯುತ್ತಾನೆ. ಅರ್ಥಾತ್ ಅವನಿಗೆ ನನ್ನೊಡನೆ ಅಭಿನ್ನತೆಯ ಅನುಭವವುಂಟಾಗುತ್ತದೆ. ॥೧೮॥

**ಭಕ್ತನಾದರೋ ಕ್ಷೇತ್ರ, ಜ್ಞಾನ ಮತ್ತು ಜ್ಞೇಯ - ಈ ಮೂರನ್ನು ತಿಳಿದುಕೊಂಡು ನಿನ್ನೊಡನೆ ಅಭಿನ್ನತೆಯ ಅನುಭವ ಪಡೆದುಕೊಳ್ಳುತ್ತಾನೆ, ಆದರೆ ಯಾವ ಸಾಧಕನು ಕೇವಲ ಜ್ಞಾನಮಾರ್ಗದಲ್ಲಿಯೇ ಹೋಗಲು ಇಚ್ಛಿಸುತ್ತಾನೆಯೋ, ಅವನಿಗಾಗಿ ಏನನ್ನು ತಿಳಿಯುವುದು ಆವಶ್ಯಕವಾಗಿದೆ?**

ಅವನು ಪ್ರಕೃತಿ (ಕ್ಷೇತ್ರ) ಮತ್ತು ಪುರುಷ (ಕ್ಷೇತ್ರಜ್ಞ-ಅರ್ಥಾತ್ ಜೀವಾತ್ಮ)- ಈ ಎರಡನ್ನೂ ಬೇರೆ ಬೇರೆ ಎಂದು ತಿಳಿಯುವುದು ಆವಶ್ಯಕವಾಗಿದೆ. ಪ್ರಕೃತಿ ಮತ್ತು ಪುರುಷ ಈ ಎರಡೂ ಅನಾದಿಯಾಗಿವೆ.

**ಇವೆರಡೂ ಅನಾದಿಗಳೇ ಆಗಿರುವಾಗ, ಮತ್ತೆ ಈ ಗುಣ ಮತ್ತು ವಿಕಾರಗಳು ಯಾವುದರಿಂದ ಉತ್ಪತ್ತಿಯಾದವು?**

ಗುಣ ಮತ್ತು ವಿಕಾರಗಳು ಪ್ರಕೃತಿಯಿಂದ ಉತ್ಪತ್ತಿಯಾಗುತ್ತವೆ. ಇವುಗಳಲ್ಲದೆ ಕಾರ್ಯ, ಕರಣ ಮತ್ತು ಕರ್ತೃತ್ವಗಳಲ್ಲಿಯೂ ಸಹ ಪ್ರಕೃತಿಯೇ ಕಾರಣವಾಗುತ್ತದೆ.

**ಮಹಾಪ್ರಭು ! ಪುರುಷ ಯಾವುದರಲ್ಲಿ ಕಾರಣನಾಗುತ್ತಾನೆ?**

ಪುರುಷ ಅರ್ಥಾತ್ ಜೀವಾತ್ಮನು ಸುಖ-ದುಃಖಗಳ ಭೋಕ್ತೃತ್ವದಲ್ಲಿ ಕಾರಣನಾಗುತ್ತಾನೆ. ॥೧೯-೨೦॥

* ಈ ಅಧ್ಯಾಯದ ಹದಿಮೂರನೇ ಶ್ಲೋಕದಲ್ಲಿ ವಿರಾಟ್ ರೂಪಿನ ಮತ್ತು ಈ ಶ್ಲೋಕದಲ್ಲಿ ಜ್ಯೋತಿಸ್ವರೂಪಿ - ಪ್ರಕಾಶ ಸ್ವರೂಪೀ ಪರಮಾತ್ಮನ ವರ್ಣನೆಯಿದೆ.

**ಪುರುಷನು ಭೋಕ್ತೃತ್ವದಲ್ಲಿ ಯಾವಾಗ ಕಾರಣನಾಗುತ್ತಾನೆ?**

ಪ್ರಕೃತಿಯಲ್ಲಿ ಸ್ಥಿತನಾಗಿರುವುದರಿಂದ, ಅದರೊಡನೆ ತನ್ನ ಸಂಬಂಧವನ್ನು ಮಾನ್ಯ ಮಾಡುವುದರಿಂದಲೇ ಪುರುಷನು ಗುಣಗಳನ್ನು ಅನುಭವಿಸುವವನಾಗುತ್ತಾನೆ ಮತ್ತು ಗುಣಗಳ ಸಂಗವುಂಟಾಗುವುದರಿಂದಲೇ ಅವನು ಒಳ್ಳೆಯ-ಕೆಟ್ಟ ಯೋನಿಗಳಲ್ಲಿ ಜನ್ಮ ತಾಳುತ್ತಾನೆ. ॥೨೧॥

**ಭಗವಂತ ! ಆ ಪುರುಷನ ಸ್ವರೂಪ ಯಾವುದು?**

ಆ ಪುರುಷನು ಪ್ರಕೃತಿಯ ಕಾರ್ಯವಾದ ಶರೀರದೊಡನೆ ಸಂಬಂಧ ಇಟ್ಟುಕೊಳ್ಳುವುದರಿಂದ 'ಉಪದ್ರಷ್ಟಾ' ಅದರೊಡನೆ ಸೇರಿ ಸಮ್ಮತಿ ಕೊಡುವುದರಿಂದ 'ಅನುಮಂತಾ' ತನ್ನನ್ನು ಅದರ ಪಾಲನೆ -ಪೋಷಣೆ ಮಾಡುವವನು ಎಂಬುದಾಗಿ ಭಾವಿಸುವುದರಿಂದ 'ಭರ್ತಾ' ಅದರ ಸಂಗದಿಂದ ಸುಖದುಃಖಗಳನ್ನು ಅನುಭವಿಸುವುದರಿಂದ 'ಭೋಕ್ತಾ' ಮತ್ತು ತನ್ನನ್ನು ಅದರ ಯಜಮಾನನೆಂದು ಭಾವಿಸುವುದರಿಂದ 'ಮಹೇಶ್ವರ' ಆಗುತ್ತಾನೆ. ಆದರೆ ಸ್ವರೂಪದಿಂದ ಆ ಪುರುಷನನ್ನು 'ಪರಮಾತ್ಮಾ' ಎಂದು ಹೇಳುತ್ತಾರೆ. ಅವನು ಈ ಶರೀರದಲ್ಲಿ ಇರುತ್ತಿದ್ದರೂ ಸಹ ವಾಸ್ತವವಾಗಿಯೂ ಶರೀರದ ಸಂಬಂಧದಿಂದ ಹೊರತಾಗಿದ್ದಾನೆ. ॥೨೨॥

**ಈ ರೀತಿ ಪ್ರಕೃತಿ ಮತ್ತು ಪುರುಷರ ಸ್ವರೂಪವನ್ನು ತಿಳಿದುಕೊಳ್ಳುವುದರಿಂದ ಏನಾಗುತ್ತದೆ?**

ಈ ರೀತಿ ಗುಣಗಳ ಸಹಿತ ಪ್ರಕೃತಿಯನ್ನು ಮತ್ತು ಗುಣರಹಿತನಾದ ಪುರುಷನನ್ನು ಯಾವ ಮನುಷ್ಯ ಸರಿಯಾಗಿ ತಿಳಿದುಕೊಳ್ಳುತ್ತಾನೆಯೋ, ಅವನು ಎಲ್ಲಾ ರೀತಿಯ ಶಾಸ್ತ್ರವಿಹಿತ ನಡವಳಿಕೆ (ಕರ್ತವ್ಯ ಕರ್ಮ) ಮಾಡುತ್ತಿದ್ದರೂ ಸಹ ಪುನಃ ಜನ್ಮ ಪಡೆಯುವುದಿಲ್ಲ ಅರ್ಥಾತ್ ಅವನು ಹುಟ್ಟು ಸಾವುಗಳಿಂದ ಮುಕ್ತನಾಗಿ ಹೋಗುತ್ತಾನೆ. ॥೨೩॥

**ಆ ಪುರುಷನನ್ನು ತಿಳಿದುಕೊಳ್ಳುವ ಇನ್ನೂ ಸಹ ಯಾವುದಾದರೂ ಉಪಾಯ ಇದೆಯೇನು?**

ಹೌದು, ಇದೆ. ಕೆಲವು ಮನುಷ್ಯರು ಧ್ಯಾನಯೋಗದ ಮೂಲಕವೂ, ಕೆಲವರು ಸಾಂಖ್ಯಯೋಗದ ಮೂಲಕವೂ ಮತ್ತು ಹಲವರು ಕರ್ಮಯೋಗದ ಮೂಲಕವೂ ತಾನೇ ತನ್ನಲ್ಲಿ ತನ್ನ ಸ್ವರೂಪವನ್ನು ತಿಳಿದುಕೊಳ್ಳುತ್ತಾರೆ. ॥೨೪॥

**ಮತ್ತಿನ್ನೂ ಸಹ ಯಾವುದಾದರೂ ಸರಳ ಉಪಾಯವಿದೆಯೇನು?**

ಹೌದು, ಇದೆ. ಯಾವ ಮನುಷ್ಯರು ಧ್ಯಾನಯೋಗ, ಸಾಂಖ್ಯಯೋಗ

ಮುಂತಾದ ಸಾಧನೆಗಳನ್ನು ತಿಳಿಯರೋ, ಕೇವಲ ಜೀವನ್ಮುಕ್ತ ಮಹಾಪುರುಷರ ಆಜ್ಞಾ ಪರಾಯಣರಾಗುತ್ತಾರೆಯೋ, ಅವರೂ ಸಹ ಮೃತ್ಯುವನ್ನು ದಾಟಿ ಹೋಗುತ್ತಾರೆ ಅರ್ಥಾತ್ ಮುಕ್ತರಾಗಿ ಹೋಗುತ್ತಾರೆ. ॥೨೫॥

**ಪರಮಾತ್ಮಾ ! ಅವರು ಮೃತ್ಯುವನ್ನು ಹೇಗೆ ದಾಟಿಹೋಗುತ್ತಾರೆ?**

ಭರತವಂಶೀಯರಲ್ಲಿ ಶ್ರೇಷ್ಠನಾದ ಎಲೈ ಅರ್ಜುನ ! ಉತ್ಪತ್ತಿಯಾಗುವ ಸಮಸ್ತ ಸ್ಥಾವರ ಮತ್ತು ಜಂಗಮ ಪ್ರಾಣಿಗಳೆಲ್ಲವೂ ಸಹ ಕ್ಷೇತ್ರ ಮತ್ತು ಕ್ಷೇತ್ರಜ್ಞರ ಒಪ್ಪಿಗೆಯ ಸಂಯೋಗದಿಂದಲೇ ಉತ್ಪತ್ತಿಯಾಗುತ್ತವೆ - ಎಂಬುದಾಗಿ ನೀನು ತಿಳಿದುಕೊ. ಆದುದರಿಂದ ಕ್ಷೇತ್ರದೊಡನೆ ತಮ್ಮ ಸಂಯೋಗವನ್ನು ತಿಳಿಯದಿರುವುದರಿಂದ ಅವರು ಪಾರಾಗಿ ಹೋಗುತ್ತಾರೆ, ಜನನ - ಮರಣಗಳಿಂದ ಮುಕ್ತರಾಗಿ ಹೋಗುತ್ತಾರೆ. ॥೨೬॥

**ಈ ಸಂಯೋಗದಿಂದ ಬಿಡುಗಡೆಹೊಂದಲು ಮನುಷ್ಯನು ಏನು ಮಾಡಬೇಕು?**

ಎರಡು ವಿಚಾರಗಳನ್ನು ಮಾಡಬೇಕು - ಸ್ವತಃಸಿದ್ಧವಾದ ಪರಮಾತ್ಮನ ಸಂಬಂಧವನ್ನು ಕಂಡುಕೊಳ್ಳುವುದು ಮತ್ತು ಪ್ರಕೃತಿ (ಶರೀರ) ಯಿಂದ ಸಂಬಂಧವನ್ನು ಕಡಿದುಕೊಳ್ಳುವುದು. ವಿಷಮ ಜಗತ್ತಿನಲ್ಲಿ ಯಾರು ಸಮ ರೂಪದಿಂದಿರುವನೋ ಮತ್ತು ನಾಶವಾಗುವುಗಳಲ್ಲಿ ಯಾರು ಅವಿನಾಶೀ ರೂಪದಿಂದಿರುವನೋ ಹಾಗೂ ಯಾರು ಪರಮೇಶ್ವರನಾಗಿದ್ದಾನೋ ಅಂತಹ ತನ್ನ ಪರಮ ಸ್ವರೂಪವನ್ನು ಯಾರು ನೋಡುತ್ತಾನೆಯೋ, ಅವನೇ ವಾಸ್ತವವಾಗಿ ಸರಿಯಾಗಿ ನೋಡುತ್ತಾನೆ. ಅರ್ಥಾತ್ ಅವನಿಗೆ ವಾಸ್ತವಿಕ ಸ್ವರೂಪದ ಅನುಭವ ಉಂಟಾಗುತ್ತದೆ. ಎಲ್ಲೆಲ್ಲಿಯೂ ಸಮಾನ ರೂಪದಿಂದ ಪರಿಪೂರ್ಣ ಪರಮಾತ್ಮನೊಡನೆ ಏಕತೆಯುಂಟಾಗುವುದರಿಂದ ಶರೀರದೊಡನೆ ತಾದಾತ್ಮ್ಯತೆಯ ಅಭಾವವುಂಟಾಗಿಬಿಡುತ್ತದೆ. ಪುನಃ ಅವನು ತನ್ನಿಂದ ತನ್ನ ಹತ್ಯೆ ಮಾಡಿಕೊಳ್ಳುವುದಿಲ್ಲ ಅರ್ಥಾತ್ ಶರೀರದ ಮರಣದಿಂದ ತನ್ನ ಮರಣವೆಂದು ಭಾವಿಸುವುದಿಲ್ಲ. ಆದುದರಿಂದ ಅವನು ಪರಮಗತಿ (ಪರಮಾತ್ಮ) ಯನ್ನು ಪಡೆದುಕೊಳ್ಳುತ್ತಾನೆ. ॥೨೭-೨೮॥

**ನೀನು ಪರಮಾತ್ಮನ ಸಂಬಂಧವನ್ನು ಕಂಡುಕೊಳ್ಳುವ ಮಾತನ್ನೇನೋ ತಿಳಿಸಿದೆ, ಈಗ ಪ್ರಕೃತಿ (ಶರೀರ)ಯೊಡನೆ ಸಂಬಂಧವನ್ನು ಹೇಗೆ ಕಳೆದುಕೊಳ್ಳುವುದು ಎಂಬುದನ್ನು ತಿಳಿಸು?**

ಸಮಸ್ತ ಕ್ರಿಯೆಗಳೂ ಪ್ರಕೃತಿಯ ಮೂಲಕವೇ ನಡೆಯುತ್ತವೆ - ಹೀಗೆ ಸರಿಯಾದ ತಿಳಿವಳಿಕೆಯಾಗುವುದರಿಂದ ಅವನು ತನ್ನಲ್ಲಿ ಕರ್ತೃತ್ವದ ಅಭಾವದ ಅನುಭವ ಮಾಡಿಕೊಳ್ಳುತ್ತಾನೆ ಹಾಗೂ ಅವನು ಸಕಲ ಪ್ರಾಣಿಗಳ ಬೇರೆ - ಬೇರೆ ಭಾವಗಳನ್ನು

(ಶರೀರಗಳನ್ನು) ಪ್ರಕೃತಿಯೊಂದರಲ್ಲಿಯೇ ಸ್ಥಿತ ಮತ್ತು ಪ್ರಕೃತಿ ಯಿಂದಲೇ ಉತ್ಪತ್ತಿಯೆಂದು ಕಂಡುಕೊಂಡಾಗ, ಅವನು ಬ್ರಹ್ಮವನ್ನು ಪಡೆದುಕೊಳ್ಳುತ್ತಾನೆ. ನಂತರ ಅವನಿಗೆ ಪ್ರಕೃತಿಯೊಡನೆ ಸಂಬಂಧವಿರುವುದಿಲ್ಲ. ॥೨೯-೩೦॥

**ಹೀಗೆ ಏಕೆ ಆಗುತ್ತದೆ?**

ಎಲೈ ಕುಂತೀನಂದನ ! ಈ ಪುರುಷನು ಸ್ವಯಂ ಅನಾದಿ ಮತ್ತು ಗುಣರಹಿತನಾದುದರಿಂದ ಸ್ವಯಂ ಅವಿನಾಶೀ, ಪರಮಾತ್ಮ ಸ್ವರೂಪಿಯೇ ಆಗಿದ್ದಾನೆ. ಈತ ಶರೀರದಲ್ಲಿ ಇರುತ್ತಿದ್ದರೂ ಸಹ ವಾಸ್ತವವಾಗಿ ಏನೂ ಮಾಡುವುದಿಲ್ಲ ಮತ್ತು ಲಿಪ್ತನಾಗುವುದೂ ಇಲ್ಲ ಅರ್ಥಾತ್ ಇವನು ಕರ್ತಾ ಮತ್ತು ಭೋಕ್ತಾ ಅಲ್ಲ. ॥೩೧॥

**ಈತ ಹೇಗೆ ಲಿಪ್ತನಾಗುವುದಿಲ್ಲ?**

ಆಕಾಶವು ಸರ್ವತ್ರ ವ್ಯಾಪಿಸಿಕೊಂಡಿದ್ದರೂ ಸಹ ಅತ್ಯಂತ ಸೂಕ್ಷ್ಮವಾದ ಕಾರಣ ಯಾವುದೇ ವಸ್ತು, ವ್ಯಕ್ತಿ ಮುಂತಾದುವುಗಳಲ್ಲಿ ಎಂದಿಗೂ ಲಿಪ್ತವಾಗುವುದಿಲ್ಲ. ಅದರಂತೆಯೇ ಈ ಪುರುಷ ಎಲ್ಲೆಲ್ಲಿಯೂ ಪರಿಪೂರ್ಣನಾಗಿರುತ್ತಿದ್ದರೂ ಸಹ ಯಾವುದೇ ಶರೀರದಲ್ಲಿ ಕೂಡಾ ಕಿಂಚಿತ್ತೂ ಸಹ ಲಿಪ್ತನಾಗುವುದಿಲ್ಲ. ॥೩೨॥

**ಭಗವಂತ ! ಈ ಪುರುಷನು ಹೇಗೆ ಕರ್ತೃನಾಗುವುದಿಲ್ಲ?**

ಎಲೈ ಭಾರತ ! ಒಬ್ಬ ಸೂರ್ಯನೇ ಇಡೀ ವಿಶ್ವವನ್ನು ಪ್ರಕಾಶಪಡಿಸುತ್ತಾನೆ, ಆದರೆ ಅವನಲ್ಲಿ ಪ್ರಕಾಶಗೊಳಿಸುವ ಕರ್ತೃತ್ವ ಬರುವುದಿಲ್ಲ. ಅದರಂತೆಯೇ ಈ ಕ್ಷೇತ್ರಜ್ಞನು ಸಮಸ್ತ ಕ್ಷೇತ್ರಗಳನ್ನು ಪ್ರಕಾಶಗೊಳಿಸುತ್ತಾನೆ. ಆದರೆ ಅವನಲ್ಲಿ ಕರ್ತೃತ್ವ ಬರುವುದಿಲ್ಲ. ಪ್ರತಿಯಾಗಿ ಪ್ರಕಾಶಕ ಮಾತ್ರವೇ ಆಗಿರುತ್ತಾನೆ. ಈ ಪ್ರಕಾಶ ಯಾರು ಜ್ಞಾನರೂಪೀ ನೇತ್ರಗಳಿಂದ ಕ್ಷೇತ್ರ ಮತ್ತು ಕ್ಷೇತ್ರಜ್ಞರ ಭೇದವನ್ನು ಹಾಗೂ ಪ್ರಕೃತಿ ಮತ್ತು ಅದರ ಕಾರ್ಯದಿಂದ ತನ್ನನ್ನು ಬೇರೆ ಎಂಬ ಅನುಭವ ಮಾಡಿಕೊಳ್ಳುವರೋ ಅವರು ಪರಮಾತ್ಮನನ್ನು ಪಡೆದುಕೊಳ್ಳುತ್ತಾರೆ. ॥೩೩-೩೪॥

❑❑

# ಹದಿನಾಲ್ಕನೇ ಅಧ್ಯಾಯವು

ಭಗವಂತನು ಹೇಳಿದನು - ಯಾವುದನ್ನು ತಿಳಿದುಕೊಂಡು ಸಮಸ್ತ ಮನನಶೀಲ ಮನುಷ್ಯರು ಪರಮಸಿದ್ಧಿಯನ್ನು ಪಡೆದುಕೊಂಡಿದ್ದಾರೆಯೋ, ಆ ಸಂಪೂರ್ಣ ಜ್ಞಾನಗಳಲ್ಲಿ ಉತ್ತಮವಾದ ಮತ್ತು ಶ್ರೇಷ್ಠವಾದ ಜ್ಞಾನವನ್ನು ನಾನು ಪುನಃ ಹೇಳುವೆನು. ॥೧॥

**ಪರಮಾತ್ಮಾ ! ಆ ಜ್ಞಾನದ ಮಹಿಮೆ ಮತ್ತೇನಿದೆ ?**

ಆ ಜ್ಞಾನದ ಆಶ್ರಯವನ್ನು ಪಡೆದುಕೊಂಡು ಯಾವ ಮನುಷ್ಯರು ನನ್ನ ಸಧರ್ಮತೆಯನ್ನು ಪಡೆದುಕೊಂಡುಬಿಟ್ಟಿದ್ದಾರೆಯೋ ಅರ್ಥಾತ್ ನನ್ನ ಸಮಾನರಾಗಿ ಹೋಗಿದ್ದಾರೆಯೋ, ಅವರು ಮಹಾ ಸರ್ಗದಲ್ಲಿಯೂ ಸಹ (ಸೃಷ್ಟಿಯ ಆದಿಯಲ್ಲಿ) ಹುಟ್ಟುವುದಿಲ್ಲ ಮತ್ತು ಮಹಾಪ್ರಳಯದಲ್ಲಿ ಸಹ ವ್ಯಥೆ ಪಡುವುದಿಲ್ಲ. ॥೨॥

**ಸೃಷ್ಟಿಯ ಆದಿಯಲ್ಲಿ ಪ್ರಾಣಿಗಳು ಹೇಗೆ ಹುಟ್ಟುತ್ತವೆ ?**

ಎಲೈ ಭಾರತ ! ನನ್ನ ಮೂಲ ಪ್ರಕೃತಿಯು ಉತ್ಪತ್ತಿ ಸ್ಥಾನವಾಗಿದೆ ಮತ್ತು ನಾನು ಅದರಲ್ಲಿ ಜೀವರೂಪೀ (ಚೇತನ) ಗರ್ಭವನ್ನು ಸ್ಥಾಪಿಸುತ್ತೇನೆ, ಅದರಿಂದ ಸಕಲ ಪ್ರಾಣಿಗಳೂ ಹುಟ್ಟುತ್ತವೆ. ಆದುದರಿಂದ ಎಲೈ ಕೌಂತೇಯ ! ಬೇರೆ ಬೇರೆ ಯೋನಿಗಳಲ್ಲಿ ಎಷ್ಟೊಂದು ಪ್ರಾಣಿಗಳು ಹುಟ್ಟುತ್ತವೆಯೋ, ಅವೆಲ್ಲವುಗಳ ಉತ್ಪತ್ತಿಯಲ್ಲಿ ತಾಯಿಯ ಸ್ಥಾನದಲ್ಲಿ ನನ್ನ ಮೂಲ ಪ್ರಕೃತಿಯಿದೆ ಮತ್ತು ಬೀಜ ಸ್ಥಾಪಿಸುವುದರಲ್ಲಿ ತಂದೆಯ ಸ್ಥಾನದಲ್ಲಿ ನಾನಿದ್ದೇನೆ.* ॥೩-೪॥

**ನೀನು ಎಲ್ಲಾ ಜೀವಿಗಳ ತಂದೆಯಾಗಿರುವೆ, ಹಾಗಾದರೆ ಆ ಜೀವಿಗಳು ಏಕೆ ಬಂಧನಕ್ಕೊಳಗಾಗುತ್ತವೆ ?**

ಎಲೈ ಮಹಾಬಾಹು ! ಸತ್ತ್ವ, ರಜ ಮತ್ತು ತಮ - ಈ ಮೂರು ಗುಣಗಳೂ ಹುಟ್ಟುವುದೇನೋ ಪ್ರಕೃತಿಯಿಂದಲೇ, ಆದರೆ ಇವುಗಳ ಸಂಗಮಾಡುವುದರಿಂದ ಅವಿನಾಶಿಯಾದ ದೇಹಿಯನ್ನು (ಜೀವಾತ್ಮನನ್ನು) ದೇಹದಲ್ಲಿ ಬಂಧಿಸುತ್ತವೆ. ॥೫॥

---

* ಮಹಾಸರ್ಗದ ಪ್ರಾರಂಭದಲ್ಲಿ ಜೀವಿಗಳನ್ನು (ತಮ್ಮ-ತಮ್ಮ ಗುಣ, ಕರ್ಮ ಮತ್ತು ಸ್ವಭಾವಕ್ಕೆ ಅನುಸಾರವಾಗಿ) ಪ್ರಕೃತಿಯೊಡನೆ ವಿಶೇಷ ಸಂಬಂಧ ಮಾಡಿಸಿಬಿಡುವುದೇ ಭಗವಂತನ ಮೂಲಕ ಬೀಜ ಸ್ಥಾಪನೆ ಮಾಡುವುದಾಗಿದೆ.

**ಪರಮಾತ್ಮ ! ಸತ್ತ್ವಗುಣದ ಸ್ವರೂಪವೇನು ಮತ್ತು ಅದು ದೇಹಿಯನ್ನು ದೇಹದಲ್ಲಿ ಹೇಗೆ ಬಂಧಿಸುತ್ತದೆ ?**

ಎಲೈ ಪಾಪಶೂನ್ಯನಾದ ಅರ್ಜುನ ! ಆ ಮೂರು ಗುಣಗಳಲ್ಲಿ ಸತ್ತ್ವಗುಣವು ಸ್ವರೂಪದಿಂದಲೇನೋ ನಿರ್ಮಲವಾದ ಕಾರಣ ಪ್ರಕಾಶಕ ಮತ್ತು ನಿರ್ವಿಕಾರವಾಗಿದೆ. ಆದರೆ ಅದು ಸುಖ ಮತ್ತು ಜ್ಞಾನದ ಆಸಕ್ತಿಯಿಂದ ದೇಹಿಯನ್ನು ದೇಹದಲ್ಲಿ ಬಂಧಿಸಿಬಿಡುತ್ತದೆ. ॥೬॥

**ರಜೋಗುಣದ ಸ್ವರೂಪವೇನು ಮತ್ತು ಅದು ದೇಹಿಯನ್ನು ಹೇಗೆ ಬಂಧಿಸುತ್ತದೆ ?**

ಎಲೈ ಕುಂತಿನಂದನ ! ತೃಷ್ಣಾ ಮತ್ತು ಆಸಕ್ತಿಯನ್ನು ಹುಟ್ಟಿಸುವ ರಜೋಗುಣವನ್ನು ನೀನು ರಾಗ-ಸ್ವರೂಪಿಯೆಂದು ತಿಳಿದುಕೊ. ಅದು ಕರ್ಮಗಳ ಆಸಕ್ತಿಯಿಂದ ದೇಹಿಯನ್ನು ದೇಹದಲ್ಲಿ ಬಂಧಿಸುತ್ತದೆ. ॥೭॥

**ತಮೋಗುಣದ ಸ್ವರೂಪವೆಂತಹುದು ಮತ್ತು ಅದು ದೇಹಿಯನ್ನು ಹೇಗೆ ಬಂಧಿಸುತ್ತದೆ?**

ಎಲೈ ಭರತವಂಶೀ ಅರ್ಜುನ ! ತಮೋಗುಣವು ಅಜ್ಞಾನದಿಂದ ಉತ್ಪತ್ತಿಯಾಗುತ್ತದೆ ಮತ್ತು ಸಮಸ್ತ ಪ್ರಾಣಿಗಳನ್ನೂ ಮೋಹಗೊಳಿಸುತ್ತದೆ. ಅದು ಪ್ರಮಾದ, ಆಲಸ್ಯ ಮತ್ತು ನಿದ್ರೆಯ ಮೂಲಕ ದೇಹಿಯನ್ನು ದೇಹದಲ್ಲಿ ಬಂಧಿಸುತ್ತದೆ. ॥೮॥

**ಪರಮಾತ್ಮಾ ! ಬಂಧಿಸುವುದಕ್ಕಿಂತ ಮೊದಲು ಮೂರು ಗುಣಗಳೂ ಏನು ಮಾಡುತ್ತವೆ ?**

ಹೇ ಭಾರತ ! ಸತ್ತ್ವಗುಣವಾದರೋ ಸುಖದಲ್ಲಿ ತೊಡಗಿಸಿ ಮನುಷ್ಯನ ಮೇಲೆ ತನ್ನ ಅಧಿಕಾರವನ್ನು ಸ್ಥಾಪಿಸುತ್ತದೆ, ರಜೋಗುಣವು ಕರ್ಮದಲ್ಲಿ ತೊಡಗಿಸಿ ಮನುಷ್ಯನ ಮೇಲೆ ತನ್ನ ಅಧಿಕಾರವನ್ನು ಚಲಾಯಿಸುತ್ತದೆ ಮತ್ತು ತಮೋಗುಣವು ಜ್ಞಾನವನ್ನು ಆವರಿಸಿಕೊಂಡು ತನ್ನ ಅಧಿಕಾರವನ್ನು ನಡೆಸುತ್ತದೆ. ॥೯॥

**ಭಗವಂತಾ ! ಮೂರು ಗುಣಗಳಲ್ಲಿ ಒಂದೊಂದು ಗುಣವು ಮನುಷ್ಯನ ಮೇಲೆ ಹೇಗೆ ತನ್ನ ಅಧಿಕಾರವನ್ನು ನಡೆಸುತ್ತದೆ?**

ಎಲೈ ಭರತವಂಶೀ ಅರ್ಜುನ ! ರಜೋಗುಣ ಮತ್ತು ತಮೋಗುಣಗಳನ್ನು ಬದಿಗೊತ್ತಿ ಸತ್ತ್ವಗುಣವು ಪ್ರಬಲವಾಗುತ್ತದೆ ಹಾಗೂ ಸತ್ತ್ವಗುಣ ಮತ್ತು ತಮೋಗುಣಗಳನ್ನು ಬದಿಗೊತ್ತಿ ರಜೋಗುಣವು ಪ್ರಬಲವಾಗುತ್ತದೆ ಹಾಗೂ

ಸತ್ತ್ವಗುಣ ಮತ್ತು ರಜೋಗುಣಗಳನ್ನು ಬದಿಗೊತ್ತಿ ತಮೋಗುಣವು ಪ್ರಬಲವಾಗುತ್ತದೆ. ॥೧೦॥

**ಪ್ರಬಲವಾದ ಸತ್ತ್ವಗುಣದ ಲಕ್ಷಣಗಳೇನು?**

ಈ ಮನುಷ್ಯ ಶರೀರದಲ್ಲಿ ಸಂಪೂರ್ಣವಾಗಿ ಇಂದ್ರಿಯಗಳಲ್ಲಿ ಮತ್ತು ಅಂತಃಕರಣದಲ್ಲಿ ಸ್ವಚ್ಛತೆ ಮತ್ತು ಅರಿಯುವ ಶಕ್ತಿ ವಿಕಸಿತವಾದಾಗ ಸತ್ತ್ವಗುಣವು ವೃದ್ಧಿಯಾಗಿದೆ ಎಂದು ತಿಳಿದುಕೊಳ್ಳಬೇಕು. ॥೧೧॥

**ವೃದ್ಧಿಯಾದ ರಜೋಗುಣದ ಲಕ್ಷಣಗಳೇನು? ಭಗವಂತ !**

ಹೇ ಭರತವಂಶದಲ್ಲಿ ಶ್ರೇಷ್ಠನೆನಿಸಿದ ಅರ್ಜುನ ! ಅಂತಃಕರಣದಲ್ಲಿ ಹಣವೇ ಮುಂತಾದವುಗಳ ಲೋಭ, ಕಾರ್ಯವೆಸಗುವ ಪ್ರವೃತ್ತಿ, ಭೋಗ ಮತ್ತು ಸಂಗ್ರಹಗಳ ಉದ್ದೇಶದಿಂದ ಹೊಸ ಹೊಸ ಕೆಲಸಗಳನ್ನು ಪ್ರಾರಂಭಮಾಡುವುದು, ಅಶಾಂತಿ, ಸ್ಪೃಹಾ ಮುಂತಾದುವುಗಳ ಪ್ರವೃತ್ತಿಯು ಹೆಚ್ಚಾದಾಗ ರಜೋಗುಣವು ವೃದ್ಧಿಯಾಗಿದೆ ಎಂದು ತಿಳಿದುಕೊಳ್ಳಬೇಕು. ॥೧೨॥

**ವೃದ್ಧಿಯಾದ ತಮೋಗುಣದ ಲಕ್ಷಣಗಳೇನು ?**

ಎಲೈ ಕುರುನಂದನ ! ಇಂದ್ರಿಯಗಳಲ್ಲಿ ಮತ್ತು ಅಂತಃಕರಣದಲ್ಲಿ ಸ್ವಚ್ಛತೆ (ತಿಳಿದುಕೊಳ್ಳುವ ಶಕ್ತಿ) ಇಲ್ಲದಿರುವಾಗ, ಯಾವ ಕೆಲಸ ಮಾಡುವುದಕ್ಕೂ ಮನಸ್ಸು ಮಾಡದಿರುವಾಗ, ಮನುಷ್ಯರು ಮಾಡಲು ಯೋಗ್ಯವಾದ ಕೆಲಸ ಮಾಡದಿರುವಾಗ ಹಾಗೂ ಮಾಡಲು ಯೋಗ್ಯವಲ್ಲದ ಕೆಲಸದಲ್ಲಿ ನಿರತನಾದಾಗ, ಅಂತಃಕರಣದಲ್ಲಿ ಮೋಹ ಆವರಿಸಿರುವಾಗ (ಇಂತಹ ಪ್ರವೃತ್ತಿಗಳು ವೃದ್ಧಿಯಾದಾಗ) ತಮೋಗುಣ ವೃದ್ಧಿಯಾಗಿದೆ ಎಂದು ತಿಳಿದುಕೊಳ್ಳಬೇಕು. ॥೧೩॥

**ತಾತ್ಕಾಲಿಕವಾಗಿ ಗುಣಗಳ ವೃದ್ಧಿಯಾದಾಗ ಯಾವ ಮನುಷ್ಯನಾದರೂ ಸತ್ತುಹೋದರೆ ಅವನಿಗೆ ಯಾವ ಗತಿ ಉಂಟಾಗುತ್ತದೆ ?**

ಸತ್ತ್ವಗುಣದ ವೃದ್ಧಿಯ ಕಾಲದಲ್ಲಿ ಸತ್ತ ಮನುಷ್ಯನು ಪುಣ್ಯಾತ್ಮರು ಪಡೆಯಲು ಯೋಗ್ಯವಾದಂತಹ ನಿರ್ಮಲ (ಉತ್ತಮ) ಲೋಕಗಳಿಗೆ ಹೋಗುತ್ತಾನೆ.

ರಜೋಗುಣದ ವೃದ್ಧಿಯ ಸಮಯದಲ್ಲಿ ಸಾಯುವವನು ಮನುಷ್ಯಯೋನಿಯಲ್ಲಿ ಹುಟ್ಟುತ್ತಾನೆ ಮತ್ತು ತಮೋಗುಣ ವೃದ್ಧಿಯಾದಾಗ ಮರಣ ಹೊಂದಿದವನು ಪಶು, ಪಕ್ಷಿ ಮುಂತಾದ ಮೂಢಯೋನಿಗಳಲ್ಲಿ ಜನ್ಮವೆತ್ತುತ್ತಾನೆ. ॥೧೪-೧೫॥

**ಪರಮಾತ್ಮಾ ! ಈ ಗುಣಗಳಿಂದ ಇಂತಹ ಗತಿಗಳು ಏಕೆ ಉಂಟಾಗುತ್ತವೆ ?**

ಏಕೆಂದರೆ, ಗುಣಗಳು ಹೇಗಿರುತ್ತವೆಯೋ, ಅದರಂತೆಯೇ ಕಾರ್ಯಗಳೂ

ಜರುಗುತ್ತವೆ. ಆದುದರಿಂದ ಸಾತ್ತ್ವಿಕ ಕರ್ಮಗಳ ಫಲ ನಿರ್ಮಲವಾಗಿರುತ್ತದೆ. ರಾಜಸ ಕರ್ಮದ ಫಲ ದುಃಖವಾಗಿದೆ ಮತ್ತು ತಾಮಸ ಕಾರ್ಯಗಳ ಫಲ ಅಜ್ಞಾನ (ಮೂಢತ್ವ) ವಾಗುತ್ತದೆ. ತಾತ್ಪರ್ಯ ಹೀಗಿದೆ - ಹೇಗೆ ಸಾತ್ತ್ವಿಕ ಇತ್ಯಾದಿ ಗುಣಗಳ ವೃತ್ತಿಗಳಂತೆ ಫಲವುಂಟಾಗುವುದೋ, ಅದರಂತೆಯೇ ಸಾತ್ತ್ವಿಕ ಮುಂತಾದ ಕರ್ಮಗಳ ಫಲವೂ ಸಹ ಉಂಟಾಗುತ್ತದೆ. ॥೧೬॥

**ಪ್ರವೃತ್ತಿಗಳ ಮತ್ತು ಕರ್ಮಗಳ ಮೂಲದಲ್ಲಿ ಏನಿದೆ?**

ಮೂರೂ ಗುಣಗಳಿವೆ. ಸತ್ತ್ವಗುಣದಿಂದ ಜ್ಞಾನ ಉಂಟಾಗುತ್ತದೆ, ರಜೋಗುಣದಿಂದ ಲೋಭ ಉತ್ಪತ್ತಿಯಾಗುತ್ತದೆ ಮತ್ತು ತಮೋಗುಣದಿಂದ ಪ್ರಮಾದ, ಮೋಹ ಹಾಗೂ ಅಜ್ಞಾನ ಉಂಟಾಗುತ್ತದೆ. ॥೧೭॥

**ಈ ಮೂರು ಗುಣಗಳಲ್ಲಿ ಇರುವವರ ಗತಿಯು ಏನಾಗುತ್ತದೆ? ಭಗವಂತ!**

ಸತ್ತ್ವಗುಣದಲ್ಲಿ ಸ್ಥಿತರಾಗಿರುವವರು ಸ್ವರ್ಗಾದಿ ಶ್ರೇಷ್ಠ ಲೋಕಗಳಿಗೆ ಹೋಗುತ್ತಾರೆ, ರಜೋಗುಣದಲ್ಲಿ ಸ್ಥಿತರಾದವರು ಮನುಷ್ಯಲೋಕದಲ್ಲಿ ಹುಟ್ಟುತ್ತಾರೆ ಮತ್ತು ನಿಂದನೀಯವಾದ ತಮೋಗುಣದಲ್ಲಿ ಸ್ಥಿತರಾಗಿರುವವರು ನರಕಾದಿಗಳಿಗೆ ಹೋಗುತ್ತಾರೆ. ॥೧೮॥

**ಹಾಗಾದರೆ ನಿನ್ನನ್ನು ಯಾರು ಸೇರುತ್ತಾರೆ?**

ಯಾರು ಕರ್ಮಗಳು ಜರುಗುವುದರಲ್ಲಿ ಗುಣಗಳ ಹೊರತು ಬೇರೆ ಯಾವುದನ್ನು ಕರ್ತೃವೆಂದು ನೋಡುವುದಿಲ್ಲವೋ ಮತ್ತು ತನ್ನನ್ನು ಗುಣಗಳಿಗಿಂತ ಅತೀತನೆಂಬ ಅನುಭವ ಪಡೆಯುತ್ತಾನೆಯೋ, ಅವನು ನನ್ನ ಸಾರೂಪ್ಯವನ್ನು ಪಡೆದುಕೊಳ್ಳುತ್ತಾನೆ ಹಾಗೂ ಆ ವಿವೇಕಿಯಾದ ಮನುಷ್ಯನು ದೇಹವನ್ನು ಉತ್ಪತ್ತಿಮಾಡುವ ಈ ಮೂರು ಗುಣಗಳನ್ನು ಅತಿಕ್ರಮಿಸಿ ಜನ್ಮ ಮೃತ್ಯು ಮತ್ತು ವೃದ್ಧಾವಸ್ಥಾರೂಪೀ ದುಃಖಗಳಿಂದ ಮುಕ್ತನಾಗಿ ಅಮರತ್ವವನ್ನು ಅನುಭವಿಸುತ್ತಾನೆ. ॥೧೯-೨೦॥

**ಅರ್ಜುನ ಕೇಳಿದನು - ಹೇ ಪ್ರಭು! ಈ ಮೂರು ಗುಣಗಳಿಂದ ಅತೀತನಾದ ಮನುಷ್ಯನು ಯಾವ ಲಕ್ಷಣಗಳಿಂದ ಕೂಡಿರುತ್ತಾನೆ?**

ಭಗವಂತ ಹೇಳಿದನು - ಎಲೈ ಪಾಂಡವ! ಸತ್ತ್ವಗುಣದ 'ಪ್ರಕಾಶ', ರಜೋಗುಣದ 'ಪ್ರವೃತ್ತಿ' ಮತ್ತು ತಮೋಗುಣದ 'ಮೋಹ' - ಈ ಮೂರು ವೃತ್ತಿಗಳು ಒದಗಿಬಂದರೆ ಅವನು ಇವುಗಳನ್ನು ದ್ವೇಷಿಸುವುದಿಲ್ಲ ಮತ್ತು ಇವುಗಳು ಒದಗಿಬರದೇ ಇದ್ದಲ್ಲಿ ಇವುಗಳನ್ನು ಅಪೇಕ್ಷಿಸುವುದಿಲ್ಲ; ಯಾರೂ ಉದಾಸೀನನಂತೆ

ಇರುತ್ತಾನೆಯೋ, ಗುಣಗಳ ದೆಸೆಯಿಂದ ವಿಚಲಿತಗೊಳಿಸಲಾಗದೋ ಹಾಗೂ ಗುಣಗಳೇ ಗುಣಗಳಲ್ಲಿ ಪ್ರವರ್ತಿಸುತ್ತವೆ ಎಂಬ ಅನುಭವ ಪಡೆಯುತ್ತಾ ತನ್ನ ಸ್ವರೂಪದಲ್ಲಿಯೇ ಸ್ಥಿತನಾಗಿರುತ್ತಾನೆಯೋ ಮತ್ತು ಸ್ವಯಂ ಚೇಷ್ಟಾ ರಹಿತನಾಗಿರುತ್ತಾನೆಯೋ.

**ಪರಮಾತ್ಮಾ ! ಗುಣಾತೀತ ಮನುಷ್ಯನ ಆಚರಣೆ ಹೇಗಿರುತ್ತದೆ ?**

ಅವನ ಆಚರಣೆಯು ಸಮಾನತೆಯಿಂದ ಕೂಡಿರುತ್ತದೆ. ಧೈರ್ಯಶಾಲಿ ಮನುಷ್ಯನು ತನ್ನ ಸ್ವರೂಪದಲ್ಲಿ ನಿರಂತರ ಸ್ಥಿರವಾಗಿರುತ್ತಾನೆ ಹಾಗೂ ಸುಖ-ದುಃಖದಲ್ಲಿ, ಮಣ್ಣಿನ ಹೆಂಟೆ, ಕಲ್ಲು ಮತ್ತು ಬಂಗಾರಗಳಲ್ಲಿ, ಇಂದ್ರಿಯಗಳೇ ಮುಂತಾದವುಗಳ ಪ್ರಿಯ-ಅಪ್ರಿಯದಲ್ಲಿ, ಹೆಸರಿನ ಹೊಗಳಿಕೆ - ತೆಗಳಿಕೆಯಲ್ಲಿ, ಶರೀರದ ಮಾನ-ಅಪಮಾನದಲ್ಲಿ, ಶತ್ರು-ಮಿತ್ರರ ಪಕ್ಷದಲ್ಲಿ ಸಮಾನವಾಗಿರುವವನು ಮತ್ತು ಕಾಮನೆ - ಆಸಕ್ತಿಗಳಿಂದ ಯಾವ ಹೊಸ ಕರ್ಮವನ್ನು ಪ್ರಾರಂಭ ಮಾಡದಿರುವವನನ್ನು ಗುಣಾತೀತ ಎಂದು ಹೇಳಲಾಗುತ್ತದೆ.

**ಗುಣಾತೀತನಾಗಲು ಉಪಾಯವೇನು ?**

ಯಾವ ಮನುಷ್ಯನು ಅವ್ಯಭಿಚಾರೀ (ಅನನ್ಯ) ಭಕ್ತಿಯೋಗದಿಂದ ನನ್ನನ್ನೇ ಭಜಿಸುತ್ತಾನೋ, ಅವನು ಈ ಮೂರು ಗುಣಗಳನ್ನು ಅತಿಕ್ರಮಿಸಿ ಬ್ರಹ್ಮ - ಪ್ರಾಪ್ತಿಗೆ ಪಾತ್ರನಾಗಿಹೋಗುತ್ತಾನೆ ॥೨೧-೨೬॥

**ಭಕ್ತಿಮಾಡುವುದು ನಿನ್ನದು ಮತ್ತು ಪಾತ್ರನಾಗುವುದು ಬ್ರಹ್ಮ ಪ್ರಾಪ್ತಿಗೆ, ಇದು ಹೇಗೆ ಪರಮಾತ್ಮಾ !?**

ಅಯ್ಯಾ ! ಬ್ರಹ್ಮ ಅವಿನಾಶೀ ಅಮೃತ, ಸನಾತನ ಧರ್ಮ ಮತ್ತು ಐಕಾಂತಿಕ ಸುಖದ ಆಶ್ರಯ ನಾನೇ ಆಗಿರುತ್ತೇನೆ ಅರ್ಥಾತ್ ಇವುಗಳೆಲ್ಲವೂ ನನ್ನ ಹೆಸರುಗಳೇ ಆಗಿರುತ್ತವೆ. ॥೨೭॥



# ಹದಿನೈದನೇ ಅಧ್ಯಾಯವು

**ಬ್ರಹ್ಮ ಅವಿನಾಶೀ ಅಮೃತ ಇತ್ಯಾದಿಗಳಿಗೆ ಆಧಾರ (ಆಶ್ರಯ) ನೀನೇ ಆಗಿರುವೆ, ಹಾಗಾದರೆ ಈ ಜಗತ್ತಿಗೆ ಆಧಾರ ಯಾರು? - ಭಗವಂತ !**

ಶ್ರೀಕೃಷ್ಣ ಹೇಳಿದನು - ಈ ವಿಶ್ವರೂಪೀ ವೃಕ್ಷಕ್ಕೆ ಆಧಾರ, ಆಶ್ರಯ ನಾನೇ ಆಗಿದ್ದೇನೆ. ಈ ವೃಕ್ಷವು ಮೇಲ್ಭಾಗಕ್ಕೆ ಬೇರುಗಳುಳ್ಳದ್ದು ಹಾಗೂ ಕೆಳಭಾಗಕ್ಕೆ ಕೊಂಬೆಗಳುಳ್ಳದ್ದಾಗಿದೆ. ನಾಳಿನವರೆವಿಗೂ ಸಹ ಸ್ಥಿರವಾಗಿರುವಂತಹುದಲ್ಲ, ಆದ ಕಾರಣ ಇದನ್ನು 'ಅಶ್ವತ್ಥ' ಎಂದು ಹೇಳುತ್ತಾರೆ. ಇದರ ಆದಿ - ಅಂತ್ಯಗಳು ಗೊತ್ತಿಲ್ಲವಾದ್ದರಿಂದ ಹಾಗೂ ಪ್ರವಾಹ ರೂಪದಿಂದ ನಿತ್ಯವಾಗಿರುವ ಕಾರಣ ಇದನ್ನು 'ಅವ್ಯಯ' ಎಂದು ಹೇಳುತ್ತಾರೆ. ವೇದಗಳಲ್ಲಿಯೂ ಬಂದಿರುವ ಸಕಾಮ ಅನುಷ್ಠಾನಗಳ ವರ್ಣನೆಯನ್ನು ಇದರ ಎಲೆಗಳೆಂದು ಹೇಳಲಾಗಿದೆ. ಇಂತಹ ವಿಶ್ವ-ವೃಕ್ಷವನ್ನು ಯಾರು ಯಥಾರ್ಥರೂಪದಲ್ಲಿ ತಿಳಿಯುತ್ತಾನೆಯೋ, ಅವನೇ ವಾಸ್ತವವಾಗಿಯೂ ವೇದಗಳ ತತ್ತ್ವವನ್ನೂ ತಿಳಿದವನು. ॥೧॥

**ಪರಮಾತ್ಮಾ ! ಈ ವಿಶ್ವವೃಕ್ಷವು ಇನ್ನೂ ಯಾವ ರೀತಿಯಾಗಿದೆ?**

ಈ ಜಗತ್ ವೃಕ್ಷದ ಸತ್ತ್ವ, ರಜ ಮತ್ತು ತಮ - ಈ ಮೂರು ಗುಣಗಳ ಮೂಲಕ ಬೆಳೆದಿರುವ ಕೊಂಬೆಗಳು ಕೆಳಗಡೆ, ಮಧ್ಯೆ ಮತ್ತು ಮೇಲಿನ ಎಲ್ಲಾ ಲೋಕಗಳಿಗೂ ಹರಡಿಕೊಂಡಿವೆ. ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧ - ಈ ಐದು ವಿಷಯಗಳು ಈ ವೃಕ್ಷದ ಕೊಂಬೆಗಳ ಚಿಗುರುಗಳಾಗಿವೆ (ಈ ವಿಷಯಗಳ ಚಿಂತನೆ ಮಾಡುವುದೇ ಹೊಸ - ಹೊಸ ಚಿಗುರುಗಳು ಹೊರಡುವುದು). ಆದರೆ ಈ ವೃಕ್ಷದ ಕೊಂಬೆಗಳ ಮೂಲ ಈ ಮನುಷ್ಯ ಲೋಕವೇ ಆಗಿರುತ್ತೆ. ಏಕೆಂದರೆ ಈ ಮನುಷ್ಯ ಲೋಕದಲ್ಲಿ ಮಾಡಲಾದ ಕರ್ಮಗಳ ಫಲವೇ ಎಲ್ಲಾ ಲೋಕಗಳಲ್ಲಿಯೂ ಭೋಗಿಸಲಾಗುತ್ತದೆ. ॥೨॥

**ಈ ವೃಕ್ಷದ ಸ್ವರೂಪವೇನು?**

ಈ ಪ್ರಪಂಚರೂಪೀ ವೃಕ್ಷದ ಸತ್ಯ ಮತ್ತು ಸುಂದರ - ಸುಖದಾಯೀ ರೂಪವು ಜನರಿಗೆ ನೋಡಲು ಬರುವಂತೆ, ಅಂತಹ ರೂಪವು ವಿಚಾರ ಮಾಡಿದಾಗ ದೊರೆಯುವುದಿಲ್ಲ; ಇದಕ್ಕೆ ಆದಿಯೂ ಇಲ್ಲ, ಅಂತ್ಯವೂ ಇಲ್ಲ ಮತ್ತು ಸ್ಥಿತಿಯೂ ಕೂಡಾ ಇಲ್ಲ;

**ಹಾಗಾದರೆ ಇದರ ಸಂಬಂಧವನ್ನು ಕಡಿದುಹಾಕಲು ಮನುಷ್ಯನು ಏನು ಮಾಡಬೇಕು ?**

ತಾದಾತ್ಮ್ಯತೆ, ಮಮತೆ ಮತ್ತು ಕಾಮನಾರೂಪೀ ಕೊಂಬೆಗಳ ಬಲವಾದ ಬುಡವುಳ್ಳ ಪ್ರಪಂಚವೃಕ್ಷವನ್ನು ಅಸಂಗತಾರೂಪೀ ಶಸ್ತ್ರದ ಮೂಲಕ ತುಂಡರಿಸಿ ಆ ಪರಮಪದ ಪರಮಾತ್ಮನನ್ನು ಹುಡುಕಬೇಕು.

**ಪರಮಾತ್ಮಾ ! ಹುಡುಕಲಾಗದೇ ಹೋದರೆ ಏನು ಮಾಡಬೇಕು ?**

ಯಾರನ್ನು ಪಡೆದ ಮನುಷ್ಯನು ಪುನಃ ಹಿಂದಿರುಗಿ ಪ್ರಪಂಚಕ್ಕೆ ಬರುವುದಿಲ್ಲವೋ ಮತ್ತು ಯಾರಿಂದ ಅನಾದಿ ಕಾಲದಿಂದ ಈ ಸೃಷ್ಟಿಯು ಹರಡಿಕೊಂಡಿದೆಯೋ ಆ ಆದಿಪುರುಷ ಪರಮಾತ್ಮನಿಗೆ ಶರಣಾಗಬೇಕು. ॥೩-೪॥

**ಶರಣಾಗುವುದರಿಂದ ಏನಾಗಬಹುದು ?**

ಶರಣಾಗತರಾಗುವ ಮನುಷ್ಯರು ಮಾನ ಮತ್ತು ಮೋಹಗಳಿಲ್ಲದವ ರಾಗುತ್ತಾರೆ; ಆಸಕ್ತಿಯಿಲ್ಲದ ಕಾರಣ ಅವರಲ್ಲಿ ಮಮತೆ ಮುಂತಾದ ದೋಷಗಳಿರುವುದಿಲ್ಲ; ಅವರು ನಿತ್ಯ - ನಿರಂತರ ಪರಮಾತ್ಮನಲ್ಲಿಯೇ ಸ್ಥಿರವಾಗಿರುತ್ತಾರೆ, ಅವರು ಸಂಪೂರ್ಣವಾಗಿ ಕಾಮನೆಗಳಿಲ್ಲದಂತಾಗುತ್ತಾರೆ, ಅವರು ಸುಖ-ದುಃಖರೂಪೀ ದ್ವಂದ್ವಗಳಿಲ್ಲದವರಾಗಿ ಅವಿನಾಶೀ ಪದವನ್ನು ಪಡೆಯುತ್ತಾರೆ. ॥೫॥

**ಶ್ರೀಕೃಷ್ಣ ! ಆ ಅವಿನಾಶೀ ಪದವಿ ಹೇಗಿದೆ ?**

ಸೂರ್ಯ, ಚಂದ್ರ ಮತ್ತು ಅಗ್ನಿ ಅದನ್ನು ಪ್ರಕಾಶಗೊಳಿಸಲಾರವು ಹಾಗೂ ಅಲ್ಲಿಗೆ ಹೋದಮೇಲೆ ಮನುಷ್ಯರು ಹಿಂದಿರುಗಿ ಈ ಪ್ರಪಂಚಕ್ಕೆ ಬರುವುದಿಲ್ಲ, ಅಂತಹ ಆ ಅವಿನಾಶೀ ಪದವೇ ನನ್ನ ಪರಮಧಾಮವಾಗಿದೆ. ॥೬॥

**ಹಿಂದಿರುಗಿ ಪ್ರಪಂಚಕ್ಕೆ ಏಕೆ ಬರುವುದಿಲ್ಲ?**

ಈ ಶರೀರದಲ್ಲಿ ಜೀವನಾಗಿರುವ ಈ ಆತ್ಮ (ಜೀವಾತ್ಮ)ನು ನನ್ನ ಸನಾತನ ಅಂಶವೇ ಆಗಿದ್ದಾನೆ, ಆದುದರಿಂದ ನನ್ನನ್ನು ಪಡೆದುಕೊಂಡಮೇಲೆ ಇವನು ಪುನಃ ಹಿಂದಿರುಗಿ ಈ ಜಗತ್ತಿಗೆ ಬರುವುದಿಲ್ಲ, ಆದರೆ ಇವನು ಪ್ರಕೃತಿಯ ಕಾರ್ಯಗಳಾದ ಇಂದ್ರಿಯಗಳನ್ನು ಮತ್ತು ಮನಸ್ಸನ್ನು ತನ್ನದೆಂದು ತಿಳಿಸಿಕೊಳ್ಳುವುದು ಇವನಿಂದ ತಪ್ಪಾಗುತ್ತದೆ. ॥೭॥

**ಇಂದ್ರಿಯಾದಿಗಳನ್ನು ತನ್ನದೆಂದು ತಿಳಿದುಕೊಳ್ಳುವುದರಿಂದ ಏನಾಗುತ್ತದೆ?**

ವಾಯುವು ಗಂಧದ ಸ್ಥಾನದಿಂದ ಗಂಧವನ್ನು ಸ್ವೀಕರಿಸಿ ತೆಗೆದುಕೊಂಡು ಹೋಗುವಂತೆಯೇ ಶರೀರ, ಇಂದ್ರಿಯಾದಿಗಳ ಒಡೆಯನಾಗಿರುವ ಜೀವಾತ್ಮನು

ಸಹ ಯಾವ ಶರೀರವನ್ನು ಬಿಡುತ್ತಾನೋ, ಅಲ್ಲಿಂದ ಮನಸ್ಸಿನ ಸಹಿತ ಇಂದ್ರಿಯಗಳನ್ನು ಸ್ವೀಕರಿಸಿಕೊಂಡು ಪುನಃ ಯಾವ ಶರೀರವನ್ನು ಪಡೆಯುತ್ತಾನೆಯೋ, ಅದರಲ್ಲಿ ಪ್ರವೇಶಿಸುತ್ತಾನೆ ಅರ್ಥಾತ್ ಸಾಯುತ್ತಾ ಹುಟ್ಟುತ್ತಾ ಇರುತ್ತಾನೆ. ॥೮॥

**ಅವನು ಅಲ್ಲಿ ಏನು ಮಾಡುತ್ತಾನೆ, ಪರಮಾತ್ಮಾ?**

ಅಲ್ಲಿ ಅವನು ಮನಸ್ಸಿನ ಆಶ್ರಯಪಡೆದು ಕಿವಿ, ಚರ್ಮ, ಕಣ್ಣು, ನಾಲಿಗೆ ಮತ್ತು ಮೂಗು – ಈ ಐದು ಇಂದ್ರಿಯಗಳ ಮೂಲಕ ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧ – ಈ ಐದು ವಿಷಯಗಳನ್ನು ಅನುರಾಗಪೂರ್ವಕ ಅನುಭವಿಸುತ್ತಾನೆ. ॥೯॥

**ಅನುರಾಗದಿಂದ ವಿಷಯಗಳನ್ನು ಅನುಭವಿಸುವುದರಿಂದ ಏನಾಗುತ್ತದೆ?**

ಗುಣಗಳಿಂದ ಕೂಡಿ ಹುಟ್ಟುವಾಗ – ಸಾಯುವಾಗ ಮತ್ತು ಭೋಗಗಳನ್ನು ಅನುಭವಿಸುವ ಸಮಯದಲ್ಲಿಯೂ ಸಹ ಈ ಜೀವಾತ್ಮನು ಸ್ವರೂಪದಿಂದ ನಿರ್ಲಿಪ್ತನಾಗಿಯೇ ಇರುತ್ತಾನೆ – ಹೀಗೆ ಅನುರಾಗದಿಂದ ವಿಷಯಗಳನ್ನು ಅನುಭವಿಸುವ ಮೂಢ ಮನುಷ್ಯರು ತಿಳಿಯಲಾರರು.

**ಹಾಗಾದರೆ ಯಾರು ತಿಳಿದುಕೊಳ್ಳುತ್ತಾರೆ?**

ಜ್ಞಾನರೂಪೀ ನೇತ್ರಗಳುಳ್ಳ ವಿವೇಕೀ ಮನುಷ್ಯರೇ ತಿಳಿದುಕೊಳ್ಳುತ್ತಾರೆ ॥೧೦॥

**ಪರಮಾತ್ಮಾ! ಯಾರಿಗೆ ಜ್ಞಾನನೇತ್ರಗಳು ತೆರೆಯುತ್ತವೆ ಮತ್ತು ಯಾರಿಗೆ ತೆರೆಯುವುದಿಲ್ಲ?**

ಯಾರು ತಮ್ಮ ಅಂತಃಕರಣವನ್ನು ಶುದ್ಧಮಾಡಿಕೊಂಡಿದ್ದಾರೆಯೋ ಅರ್ಥಾತ್ ನಿತ್ಯ ಪ್ರಾಪ್ತನಿಗೆ ಮಹತ್ತ್ವ ಕೊಟ್ಟಿದ್ದಾರೆಯೋ, ಅಂತಹ ಪ್ರಯತ್ನಶೀಲ ಯೋಗಿಗಳು ತಮ್ಮೊಳಗೆ ಆ ತತ್ತ್ವವನ್ನು ತಿಳಿಯುತ್ತಾರೆ ಅರ್ಥಾತ್ ಅವರ ಜ್ಞಾನನೇತ್ರಗಳು ತೆರೆಯುತ್ತವೆ. ಆದರೆ ಯಾರು ತಮ್ಮ ಅಂತಃಕರಣವನ್ನು ಶುದ್ಧವಾಗಿಟ್ಟುಕೊಂಡಿಲ್ಲವೋ ಅರ್ಥಾತ್ ಸ್ವತಃ ದೊರೆತ ವಿವೇಕವನ್ನು ಆದರಿಸುವುದಿಲ್ಲವೋ, ಅಂತಹ ಅವಿವೇಕೀ ಮನುಷ್ಯರು ಪ್ರಯತ್ನ ಮಾಡಿದರೂ ಸಹ ಈ ತತ್ತ್ವವನ್ನು ತಿಳಿಯುವುದಿಲ್ಲ ಅರ್ಥಾತ್ ಅವರ ಜ್ಞಾನನೇತ್ರಗಳು ತೆರೆಯುವುದಿಲ್ಲ. ॥೧೧॥

**ತನ್ನೊಳಗಿರುವ ತತ್ತ್ವವು ಯಾವುದು?**

ನಾನೇ ಆಗಿದ್ದೇನೆ, ಇಡೀ ಜಗತ್ತನ್ನೇ ಪ್ರಕಾಶಗೊಳಿಸುವ ಸೂರ್ಯನಲ್ಲಿ ಇರುವ ಆ ತೇಜಸ್ಸು ಮತ್ತು ಚಂದ್ರನಲ್ಲಿರುವ ತೇಜಸ್ಸು ಮತ್ತು ಅಗ್ನಿಯಲ್ಲಿರುವ ತೇಜಸ್ಸು

ಅದನ್ನೆಲ್ಲಾ ನನ್ನ ತೇಜಸ್ಸಿಂದೇ ತಿಳಿ. ಅಂದರೆ ಸೂರ್ಯ, ಚಂದ್ರ ಮತ್ತು ಅಗ್ನಿಯಲ್ಲಿ ನಾನೇ ತೇಜಸ್ಸಿನ ರೂಪದಿಂದ ಇದ್ದು ಇಡೀ ಜಗತ್ತನ್ನು ಪ್ರಕಾಶಗೊಳಿಸುತ್ತೇನೆ. ॥೧೨॥

**ಪರಮಾತ್ಮಾ! ನೀನು ಮತ್ತಿನ್ನೇನು ಮಾಡುತ್ತಿರುವೆ?**

ನಾನೇ ಪೃಥ್ವಿಯಲ್ಲಿ ಪ್ರವೇಶಮಾಡಿ ನನ್ನ ಶಕ್ತಿಯಿಂದ ಸಮಸ್ತ ಪ್ರಾಣಿಗಳನ್ನೂ ಧರಿಸುತ್ತೇನೆ ಮತ್ತು ನಾನೇ ರಸಮಯ ಚಂದ್ರನಾಗಿ ಸಕಲ ವನಸ್ಪತಿಗಳನ್ನು ಪುಷ್ಟಿಗೊಳಿಸುತ್ತೇನೆ. ॥೧೩॥

**ಮತ್ತು ನೀನು ಏನು ಕೆಲಸ ಮಾಡುವೆ?**

ಪ್ರಾಣಿಗಳ ಶರೀರದಲ್ಲಿ ಇರುವ ನಾನೇ ಪ್ರಾಣ-ಅಪಾನದಿಂದ ಕೂಡಿದ ವೈಶ್ವಾನರ (ಜಠರಾಗ್ನಿ) ಆಗಿ ಪ್ರಾಣಿಗಳ ಮೂಲಕ ತಿನ್ನಲಾದ ನಾಲ್ಕು ಪ್ರಕಾರದ (ಭೋಜ್ಯ, ಪೇಯ, ಚೋಷ್ಯ ಮತ್ತು ಲೇಹ್ಯ) ಅನ್ನವನ್ನು ಜೀರ್ಣಿಸುತ್ತೇನೆ. ॥೧೪॥

**ಇನ್ನು ನಿನ್ನ ವಿಲಕ್ಷಣತೆ ಏನಿದೆ?**

ನಾನೇ ಎಲ್ಲರ ಹೃದಯದಲ್ಲಿಯೂ ಇರುತ್ತೇನೆ. ನನ್ನಿಂದಲೇ ಸ್ಮೃತಿ, ಜ್ಞಾನ ಮತ್ತು ಅಪೋಹನ (ಸಂಶಯಾದಿ ದೋಷಗಳ ನಿವಾರಣೆ) ಉಂಟಾಗುತ್ತದೆ. ಸಕಲ ವೇದಗಳ ಮೂಲಕ ತಿಳಿಯಲು ಯೋಗ್ಯನಾದವನು ನಾನೇ ಆಗಿದ್ದೇನೆ. ವೇದಗಳ ತತ್ತ್ವದ ನಿರ್ಣಾಯಕ ಮತ್ತು ವೇದಗಳನ್ನು ತಿಳಿದವನೂ ಸಹ ನಾನೇ ಆಗಿದ್ದೇನೆ. ॥೧೫॥

**ನೀನು ಯಾರ ಹೃದಯದಲ್ಲಿ ವಿರಾಜಮಾನನಾಗಿರುವಿಯೋ, ಅವರೆಲ್ಲಾ ಯಾರು?**

ಈ ಮಾನವಲೋಕದಲ್ಲಿ ಕ್ಷರ (ವಿನಾಶಿ) ಮತ್ತು ಅಕ್ಷರ (ಅವಿನಾಶಿ) - ಎಂಬ ಈ ಎರಡು ಬಗೆಯ ಪುರುಷರಿದ್ದಾರೆ. ಇವರಲ್ಲಿ ಎಲ್ಲಾ ಪ್ರಾಣಿಗಳ ಶರೀರ ವಿನಾಶಿ ಮತ್ತು ಜೀವಾತ್ಮನು ಅವಿನಾಶೀ ಎಂದು ಹೇಳುತ್ತದೆ. ॥೧೬॥

**ಕ್ಷರ ಮತ್ತು ಅಕ್ಷರಗಳಲ್ಲದೆ ಇನ್ನೂ ಯಾರಾದರೂ ಇದ್ದಾರೆಯೇ?**

ಹೌದು, ಕ್ಷರ ಮತ್ತು ಅಕ್ಷರರಿಗಿಂತ ಬೇರೆಯಾದ ಉತ್ತಮ ಪುರುಷನಿದ್ದಾನೆ, ಆತನನ್ನು ಜಗತ್ತಿನಲ್ಲಿ ಪರಮಾತ್ಮನೆಂಬ ಹೆಸರಿನಿಂದ ಕರೆಯುತ್ತಾರೆ ಮತ್ತು ಆತನು ಮೂರುಲೋಕಗಳ ಪಾಲನೆ - ಪೋಷಣೆ ಮಾಡುವ ಅವಿನಾಶೀ ಈಶ್ವರನಾಗಿದ್ದಾನೆ. ॥೧೭॥

**ಪರಮಾತ್ಮಾ! ಉತ್ತಮ ಪುರುಷನಾದರೋ ಬೇರೆ ಇದ್ದಾನೆ; ಆದರೆ, ನೀನು ಯಾರು ?**

ಅಯ್ಯಾ ! ಆ ಉತ್ತಮ ಪುರುಷ ನಾನೇ ಆಗಿದ್ದೇನೆ. ನಾನು ಕ್ಷರಕ್ಕಿಂತ ಅತೀತನಾಗಿದ್ದೇನೆ. ಅದಕ್ಕಾಗಿ ಲೋಕದಲ್ಲಿ ಮತ್ತು ವೇದಗಳಲ್ಲಿ ನಾನು ಪುರುಷೋತ್ತಮನೆಂಬ ಹೆಸರಿನಿಂದ ಪ್ರಸಿದ್ಧನಾಗಿದ್ದೇನೆ. ||೧೮||

**ಪರಮಾತ್ಮಾ! ನೀನು ಪುರುಷೋತ್ತಮನೆಂಬ ಹೆಸರಿನಿಂದ ಪ್ರಸಿದ್ಧನಾಗಿರುವೆ, ಆದರೆ ಇದರಿಂದ ಮನುಷ್ಯರಿಗೆ ಲಾಭವೇನು ?**

ಎಲೈ ಭಾರತ ! ಮೋಹರಹಿತನಾದ ಭಕ್ತನು ನನ್ನನ್ನು ಈ ಪ್ರಕಾರ ಪುರುಷೋತ್ತಮನೆಂದು ತಿಳಿದುಕೊಳ್ಳುವವನು ಸರ್ವಜ್ಞನಾಗಿ ಹೋಗುತ್ತಾನೆ ಅರ್ಥಾತ್ ಅವನು ಏನನ್ನೂ ಸಹ ತಿಳಿದುಕೊಳ್ಳಬೇಕಾಗಿರುವುದು ಬಾಕಿ ಉಳಿದಿರುವುದಿಲ್ಲ. ನಂತರ ಅವನು ಎಲ್ಲಾ ರೀತಿಯಿಂದಲೂ ಕೇವಲ ನನ್ನನ್ನೇ ಭಜಿಸುತ್ತಾನೆ ಅರ್ಥಾತ್ ನನ್ನಲ್ಲಿಯೇ ತೊಡಗಿರುತ್ತಾನೆ. ||೧೯||

**ಭಗವಂತ ! ಇಂತಹದೇ ವಿಚಾರವಿರುವಾಗ ಎಲ್ಲರೂ ನಿನ್ನಲ್ಲಿಯೇ ಏಕೆ ತೊಡಗಿರುವುದಿಲ್ಲ?**

ಎಲೈ ಪಾಪರಹಿತನಾದ ಅರ್ಜುನ ! ನಾನು ನಿನಗೆ ಹೇಳಿರುವ ಈ ವಿಚಾರವು ಅತ್ಯಂತ ಗೋಪನೀಯವಾಗಿದೆ. ಇದನ್ನು ತಿಳಿದುಕೊಂಡು ನನ್ನ ಭಕ್ತನು ಜ್ಞಾತ-ಜ್ಞಾತವ್ಯ ಕೃತಕೃತ್ಯ ಮತ್ತು ಪ್ರಾಪ್ತ ಪ್ರಾಪ್ತವ್ಯನಾಗಿ ಹೋಗುತ್ತಾನೆ. ||೨೦||



## ಹದಿನಾರನೇ ಅಧ್ಯಾಯವು

**ಪರಮಾತ್ಮಾ ! ಆ ಅತ್ಯಂತ ಗೋಪನೀಯ ವಿಚಾರದ ಅಧಿಕಾರಿ ಯಾರಾಗಿರುತ್ತಾರೆ?**

ದೈವೀ ಸಂಪತ್ತುಳ್ಳವರು ಆಗುತ್ತಾರೆ.*

**ದೈವೀ ಸಂಪತ್ತುಳ್ಳ ಮನುಷ್ಯರ ಲಕ್ಷಣಗಳೇನು?**

ಶ್ರೀಕೃಷ್ಣ ಹೇಳಿದನು - ಅವು ಈ ಪ್ರಕಾರವಾಗಿವೆ -

೧. ನನ್ನ ದೃಢ ನಂಬಿಕೆಯಿಂದ ಅಭಯವಾಗಿರುವುದು.

೨. ಅಂತಃಕರಣದಲ್ಲಿ ನನ್ನನ್ನು ಪಡೆದುಕೊಳ್ಳುವ ಒಂದೇ ದೃಢ ನಿಶ್ಚಯ ವಿರುವುದು.

೩. ನನ್ನನ್ನು ತತ್ತ್ವದಿಂದ ತಿಳಿದುಕೊಳ್ಳಲು ಪ್ರತಿಯೊಂದು ಪರಿಸ್ಥಿತಿ ಯಲ್ಲಿಯೂ ಸಮನಾಗಿರುವುದು.

೪. ಸಾತ್ತ್ವಿಕ ದಾನ ನೀಡುವುದು.

೫. ಇಂದ್ರಿಯಗಳನ್ನು ವಶದಲ್ಲಿಟ್ಟುಕೊಳ್ಳುವುದು.

೬. ತನ್ನ ಕರ್ತವ್ಯವನ್ನು ಪಾಲಿಸುವುದು.

೭. ಶಾಸ್ತ್ರಗಳ ಸಿದ್ಧಾಂತಗಳನ್ನು ತನ್ನ ಜೀವನದಲ್ಲಿ ಅಳವಡಿಸಿಕೊಳ್ಳುವುದು.

೮. ತನ್ನ ಕರ್ತವ್ಯದ ಪಾಲನೆಯ ಸಮಯದಲ್ಲಿ ಬರುವ ಕಷ್ಟಗಳನ್ನು ಸಂತೋಷದಿಂದ ಸಹಿಸಿಕೊಳ್ಳುವುದು.

೯. ಕಾಯೇನ, ವಾಚಾ, ಮನಸಾ ಸರಳತೆ.

೧೦. ಕಾಯೇನ - ವಾಚಾ - ಮನಸಾ ಯಾವುದೇ ಪ್ರಾಣಿಗೂ ಎಂದಿಗೂ ಕಿಂಚಿತ್ ಮಾತ್ರವೂ ಸಹ ಕಷ್ಟವನ್ನು ಕೊಡದಿರುವುದು.

೧೧. ಹೇಗೆ ಕಂಡಿತೋ, ಕೇಳಿಸಿತೋ ಮತ್ತು ತಿಳಿಯಿಯೋ, ಅದನ್ನು ಯಥಾವತ್ ಪ್ರಿಯವಾದ ಶಬ್ದಗಳಲ್ಲಿ ಹೇಳಿಬಿಡುವುದು.

---

* 'ದೇವ್' ಎಂಬ ಹೆಸರು ಪರಮಾತ್ಮನದು. ಆ ಪರಮಾತ್ಮನ ಯಾವ ಸಂಪತ್ತಿದೆಯೋ, ಗುಣಗಳಿವೆಯೋ ಅವುಗಳನು 'ದೈವೀ ಸಂಪತ್ತು' ಎಂದು ಹೇಳುತ್ತಾರೆ ಅರ್ಥಾತ್ ಯಾವ ಸಾಧನಗಳು ಪರಮಾತ್ಮನ ಪ್ರಾಪ್ತಿಗೆ ಕಾರಣ (ನಿಮಿತ್ತ)ವಾಗುತ್ತವೆಯೋ ಅವು ದೈವೀ ಸಂಪತ್ತು ಎಂದು ಹೇಳಲ್ಪಡುತ್ತವೆ.

೧೨. ನನ್ನ ಸ್ವರೂಪವನ್ನು ತಿಳಿದುಕೊಂಡು ಯಾರ ಮೇಲೆಯೂ ಎಂದಿಗೂ ಕ್ರೋಧ ಮಾಡಿಕೊಳ್ಳದಿರುವುದು.

೧೩. ಸಾಂಸಾರಿಕ ಕಾಮನೆಗಳನ್ನು ತ್ಯಾಗ ಮಾಡುವುದು.

೧೪. ಅಂತಃಕರಣದಲ್ಲಿ ರಾಗ - ದ್ವೇಷಜನಿತ ಚಂಚಲತೆ ಉಂಟಾಗದಿರುವುದು.

೧೫. ಚಾಡಿ ಹೇಳದಿರುವುದು.

೧೬. ಸಕಲ ಪ್ರಾಣಿಗಳಲ್ಲಿಯೂ ದಯೆಯ ಭಾವುಉಂಟಾಗುವುದು.

೧೭. ಸಾಂಸಾರಿಕ ವಿಷಯಗಳಲ್ಲಿ ಆಶೆಪಡದಿರುವುದು.

೧೮. ಹೃದಯವು ಕೋಮಲವಾಗಿರುವುದು.

೧೯. ಕರ್ತವ್ಯವಲ್ಲದ ಕಾರ್ಯ ಮಾಡಲು ನಾಚಿಕೆಯಾಗುವುದು.

೨೦. ದುಡುಕುವ ಸ್ವಭಾವವಿಲ್ಲದಿರುವುದು.

೨೧. ಶರೀರ ಮತ್ತು ಮಾತಿನಲ್ಲಿ ತೇಜಸ್ಸು (ಪ್ರಭಾವ) ಇರುವುದು.

೨೨. ಶಿಕ್ಷೆ ವಿಧಿಸುವ ಸಾಮರ್ಥ್ಯ ತನ್ನಲ್ಲಿದ್ದರೂ ಸಹ ಅಪರಾಧಿಯ ಅಪರಾಧವನ್ನು ಕ್ಷಮಿಸಿಬಿಡುವುದು.

೨೩. ಪ್ರತಿಯೊಂದು ಪರಿಸ್ಥಿತಿಯಲ್ಲಿಯೂ ಧೈರ್ಯವಾಗಿರುವುದು.

೨೪. ಶರೀರವನ್ನು ಶುದ್ಧವಾಗಿಟ್ಟುಕೊಳ್ಳುವುದು.

೨೫. ಸೇಡು ತೀರಿಸಿಕೊಳ್ಳುವ ಭಾವನೆಯಿಲ್ಲದಿರುವುದು.

೨೬. ತನ್ನಲ್ಲಿ ಶ್ರೇಷ್ಠತೆಯ ಭಾವನೆಯಿಲ್ಲದಿರುವುದು.

ಎಲೈ ಭರತವಂಶೀ ಅರ್ಜುನ ! ಇವುಗಳೆಲ್ಲಾ ದೈವೀ ಸಂಪತ್ತನ್ನು ಪಡೆದ ಮನುಷ್ಯರ ಲಕ್ಷಣಗಳು, ಅರ್ಥಾತ್ ಈ ಲಕ್ಷಣಗಳುಳ್ಳವನನ್ನು ನನ್ನ ಭಕ್ತಿಯ ಅಧಿಕಾರಿ ಎಂದು ಭಾವಿಸಬೇಕು. * ॥೧-೩॥

* ಇಲ್ಲಿ ಈ ಪ್ರಶ್ನೆ ಉಂಟಾಗುತ್ತದೆ - ಇಂತಹ ಲಕ್ಷಣಗಳುಳ್ಳವರೇನೋ ಭಕ್ತಿಗೆ ಅಧಿಕಾರಿಗಳಾಗಿದ್ದಾರೆ. ಆದರೆ ಇಂತಹ ಲಕ್ಷಣಗಳಿಲ್ಲದ ಆ ದುರಾಚಾರೀ ಮನುಷ್ಯರಾದರೋ ಭಕ್ತಿಗೆ ಅಧಿಕಾರಿಯೇ ಆಗಲಾರರೇ? ವಿಚಾರವೇನೋ ಸರಿಯಾಗಿಯೇ ಇದೆ; ಆದರೆ ಯಾರಾದರು ದುರಾಚಾರೀ ಮನುಷ್ಯನೇ ಆಗಲಿ ಅನನ್ಯ ಭಾವದಿಂದ ಭಗವಂತನಲ್ಲಿ ತಲ್ಲೀನನಾಗಿಹೋದರೆ ಅವನು ಬಹುಬೇಗ ಧರ್ಮಾತ್ಮನಾಗಿಬಿಡುತ್ತಾನೆ ಅರ್ಥಾತ್ ಭಗವತ್ಕೃಪೆಯಿಂದ ಅವನಲ್ಲಿ ದೈವೀ ಸಂಪತ್ತಿನ ಲಕ್ಷಣಗಳು ಶೀಘ್ರವಾಗಿ ಬಂದುಬಿಡುತ್ತವೆ (ಗೀತಾ ೯/೩೦-೩೧॥)

**ಪರಮಾತ್ಮಾ ! ಅನಧಿಕಾರಿ ಯಾರು ?**

ಆಸುರೀ ಸಂಪತ್ತುಳ್ಳವನು.*

**ಆಸುರೀ ಸಂಪತ್ತುಳ್ಳ ಮನುಷ್ಯರ ಲಕ್ಷಣಗಳೇನು ?**

ಅವು ಈ ಪ್ರಕಾರವಾಗಿವೆ -

೧. ದಂಭ (ಆಡಂಬರ) ಮಾಡುವುದು.

೨. ದರ್ಪಮಾಡುವುದು ಅರ್ಥಾತ್ ಮಮತೆಯುಳ್ಳ ವಸ್ತುಗಳ ಕುರಿತು ತನ್ನಲ್ಲಿಯೇ ದೊಡ್ಡಸ್ತಿಕೆಯ ಅನುಭವ ಮಾಡಿಕೊಳ್ಳುವುದು.

೩. ಅಹಂಕಾರಯುತ ವಸ್ತುಗಳ ಕುರಿತು ಗರ್ವಪಡುವುದು.

೪. ಕ್ರೋಧ ಮಾಡುವುದು.

೫. ಮನಸ್ಸು ಮಾತು, ನಡವಳಿಕೆ ಇತ್ಯಾದಿಗಳಲ್ಲಿ ಕಠೋರವಾಗಿರುವುದು.

೬. ಸತ್-ಅಸತ್, ಕರ್ತವ್ಯ - ಅಕರ್ತವ್ಯ ಇತ್ಯಾದಿಗಳ ಜ್ಞಾನ (ವಿವೇಕ)ಕ್ಕೆ ಮಹತ್ತ್ವ ಕೊಡದಿರುವುದು.

ಎಲೈ ಪೃಥಾನಂದನ ! ಇವುಗಳೆಲ್ಲಾ ಆಸುರೀ ಸಂಪತ್ತನ್ನು ಪಡೆದಿರುವ ಮನುಷ್ಯನು ಪ್ರಾಯಶಃ ನನ್ನ ಭಕ್ತಿಗೆ ಅಧಿಕಾರಿಯಾಗುವುದಿಲ್ಲ. ॥೪॥

**ಪರಮಾತ್ಮಾ ! ಈ ದೈವೀ ಮತ್ತು ಆಸುರೀ ಸಂಪತ್ತಿಗೆ ಯಾವ ಫಲ ಉಂಟಾಗುತ್ತದೆ ?**

ದೈವೀ ಸಂಪತ್ತು ಮುಕ್ತಿ ದೊರಕಿಸುವಂತಹುದು ಮತ್ತು ಆಸುರೀ ಸಂಪತ್ತು ಬಂಧಿಸುವಂತಹುದಾಗಿದೆ. ಆದರೆ ಎಲೈ ಪಾಂಡವ ! ನೀನು ಶೋಕ (ಚಿಂತೆ) ಪಡಬೇಕಾಗಿಲ್ಲ ; ಏಕೆಂದರೆ ನೀನು ದೈವೀ ಸಂಪತ್ತನ್ನು ಪಡೆದಿರುವೆ. ॥೫॥

---

* 'ಅಸು' ಎಂದರೆ ಪ್ರಾಣ. ಆ ಪ್ರಾಣದಲ್ಲಿಯೇ ಯಾರು ತನ್ಮಯನಾಗಿರಲು ಇಚ್ಛಿಸುತ್ತಾರೆಯೋ, ಪ್ರಾಣವನ್ನೇ ಇಟ್ಟುಕೊಂಡಿರಲು ಬಯಸುತ್ತಾರೆಯೋ, ಅವರನ್ನು 'ಅಸುರ' ಎಂದು ಹೇಳುತ್ತಾರೆ. ತಾತ್ಪರ್ಯ ಹೀಗಿದೆ - ಶರೀರದೊಡನೆ ಏಕತೆಯನ್ನು ಭಾವಿಸಿಕೊಂಡು 'ನಾನು ಎಂದಿಗೂ ಸಾಯುವುದಿಲ್ಲ, ಯಾವಾಗಲೂ ಜೀವಿಸಿರಬೇಕು ಮತ್ತು ಸುಖವನ್ನು ಅನುಭವಿಸುತ್ತಾ ಇರುವೆನು' - ಇಂತಹ ಇಚ್ಛೆಯುಳ್ಳ ಮನುಷ್ಯರು 'ಅಸುರರಾಗಿದ್ದಾರೆ'. ಆ ಅಸುರರಿಗಿರುವ ಸಂಪತ್ತು (ಲಕ್ಷಣ) ಆಸುರೀ ಸಂಪತ್ತು ಎಂದು ಹೇಳಲಾಗುತ್ತದೆ.

**ಆಸುರೀ ಸಂಪತ್ತು ಹೇಗೆ ಬಂಧನಕಾರಕವಾಗುತ್ತದೆ?**

ಈ ಲೋಕದಲ್ಲಿ ಎರಡು ಬಗೆಯ ಪ್ರಾಣಿಗಳ ಸೃಷ್ಟಿಯಿದೆ - ದೈವೀ ಮತ್ತು ಆಸುರೀ, ದೈವೀ ಸಂಪತ್ತನ್ನು ನಾನು ವಿಸ್ತಾರವಾಗಿ ಹೇಳಿದೆ. ಎಲೈ ಪಾರ್ಥ ! ಆಸುರೀ ಸಂಪತ್ತನ್ನು ವಿಸ್ತಾರವಾಗಿ ಈಗ ಹೇಳುತ್ತೇನೆ ಕೇಳು. ಆಸುರೀ ಸಂಪತ್ತುಳ್ಳ ಮನುಷ್ಯನು ಯಾವುದರಲ್ಲಿ ಪ್ರವೃತ್ತನಾಗಬೇಕು ಮತ್ತು ಯಾವುದರಿಂದ ನಿವೃತ್ತನಾಗಬೇಕು - ಎಂಬುದನ್ನು ತಿಳಿಯುವುದಿಲ್ಲ ಹಾಗೂ ಆತನಲ್ಲಿ ಶೌಚಾಚಾರ (ಬಾಹ್ಯ ಶುದ್ಧಿ) ಇರುವುದಿಲ್ಲ. ಸದಾಚಾರ (ಶ್ರೇಷ್ಠ ಆಚರಣೆ) ಇರುವುದಿಲ್ಲ ಮತ್ತು ಸತ್ಯ ಪಾಲನೆಯೂ ಇರುವುದಿಲ್ಲ. ॥೬-೭॥

**ಪರಮಾತ್ಮಾ ! ಅವರಲ್ಲಿ ಶೌಚಾಚಾರ ಮುಂತಾದವು ಏಕೆ ಇರುವುದಿಲ್ಲ?**

ಅವರ ದೃಷ್ಟಿಯೇ ವಿರುದ್ಧವಾಗಿರುತ್ತದೆ. ಈ ಜಗತ್ತು ಅಸತ್ಯವಾದದ್ದು ಅರ್ಥಾತ್ ಇದರಲ್ಲಿ ಯಾವ ವಿಚಾರವೂ (ಶಾಸ್ತ್ರ ಧರ್ಮ ಇತ್ಯಾದಿ) ಸತ್ಯವಲ್ಲ. ಈ ಪ್ರಪಂಚದಲ್ಲಿ ಧರ್ಮ - ಅಧರ್ಮ, ಪುಣ್ಯ - ಪಾಪ ಇತ್ಯಾದಿಗಳಿಗೆ ಯಾವ ಮರ್ಯಾದೆಯೂ ಇಲ್ಲ. ಈ ವಿಶ್ವವನ್ನು ರಚಿಸುವ ಯಾವ ಈಶ್ವರನೂ ಇಲ್ಲ. ಆದರೆ ಸ್ತ್ರೀಗೆ ಪುರುಷನ ಮತ್ತು ಪುರುಷನಿಗೆ ಸ್ತ್ರೀಯ ಇಚ್ಛೆಯುಂಟಾದರೆ ಇಬ್ಬರ ಸಂಯೋಗದಿಂದ ಈ ಪ್ರಪಂಚ ಹುಟ್ಟಿದೆ. ಆದುದರಿಂದ ಈ ಜಗತ್ತಿನ ಉತ್ಪತ್ತಿಗೆ ಕಾರಣ ಕಾಮವೇ ಹೊರತು ಮತ್ತೆ ಯಾವ ಕಾರಣವೂ ಇರುವುದಿಲ್ಲ ಎಂಬುದಾಗಿ ಅವರು ಹೇಳುತ್ತಾರೆ. ॥೮॥

**ಆ ಆಸುರೀ ಸಂಪತ್ತುಳ್ಳವರ ಕಾರ್ಯ ಹೇಗಿರುತ್ತವೆ?**

ಮೇಲೆ ತಿಳಿಸಿದ ನಾಸ್ತಿಕ ದೃಷ್ಟಿಯನ್ನು ಆಶ್ರಯಿಸಿದ ಆ ಜನರು ತಮ್ಮ ಶಾಶ್ವತ ಸ್ವರೂಪ (ಆತ್ಮಾ)ವನ್ನು ಒಪ್ಪುವುದಿಲ್ಲ, ಅವರ ಬುದ್ಧಿಯು ತುಚ್ಛವಾಗಿರುತ್ತದೆ, ಅವರ ಕಾರ್ಯಗಳು ಅತ್ಯಂತ ಉಗ್ರ (ಭಯಂಕರ)ವಾಗಿರುತ್ತವೆ, ಅವರು ಜಗತ್ತಿಗೇ ಶತ್ರುಗಳಾಗಿರುತ್ತಾರೆ. ಅಂತಹ ಮನುಷ್ಯರ ಸಾಮರ್ಥ್ಯ ಇತರರ ನಾಶಕ್ಕಾಗಿಯೇ ಇರುತ್ತದೆ.

ಎಂದಿಗೂ ಪೂರ್ಣಗೊಳ್ಳದಿರುವಂತಹ ಕಾಮನೆಗಳನ್ನು ಆಶ್ರಯಿಸಿ ಆಡಂಬರ, ಅಹಂಕಾರ ಮತ್ತು ಮದದಲ್ಲಿ ಮಗ್ನರಾಗಿರುವ ಹಾಗೂ ಅಪವಿತ್ರ ನಿಯಮಗಳನ್ನು ಅನುಸರಿಸುವ ಆ ಮನುಷ್ಯರು ಮೋಹದ ಕಾರಣದಿಂದ ಅನೇಕ ದುರಾಗ್ರಹಗಳನ್ನು ಇಟ್ಟುಕೊಂಡು ಜಗತ್ತಿನಲ್ಲಿ ಸಂಚರಿಸುತ್ತಾ ಇರುತ್ತಾರೆ. ॥೯-೧೦॥

**ಅವರ ಭಾವಗಳು ಹೇಗಿರುತ್ತವೆ?**

ಅವರು ಮೃತ್ಯುಪರ್ಯಂತ ಇರುವ ದೊಡ್ಡ-ದೊಡ್ಡ ಚಿಂತೆಗಳನ್ನು

ಆಶ್ರಯಿಸಿರುತ್ತಾರೆ. ಅವರು ಪದಾರ್ಥಗಳ ಸಂಗ್ರಹ ಮತ್ತು ಅವುಗಳನ್ನು ಅನುಭವಿಸುವುದರಲ್ಲಿಯೇ ಮಗ್ನರಾಗಿರುವವರು ಮತ್ತು 'ಏನೆಲ್ಲಾ ಇದೆಯೋ, ಅದು ಇಷ್ಟೇ (ಸುಖವನ್ನು ಅನುಭವಿಸುವುದು ಮತ್ತು ಸಂಗ್ರಹಿಸುವುದು) ಆಗಿದೆ- ಹೀಗೆ ನಿಶ್ಚಯ ಮಾಡುವವರಾಗುತ್ತಾರೆ. ॥೧೧॥

**ಅವರು ಯಾವ ಉದ್ದೇಶವಿಟ್ಟುಕೊಂಡು ನಡೆಯುತ್ತಾರೆ ? - ಭಗವಂತ !**

ನೂರಾರು ಆಶೆಗಳ ಉರುಳುಗಳಿಂದ ಬಂಧಿತರಾದ ಆ ಮನುಷ್ಯರು ಕಾಮ-ಕ್ರೋಧಗಳ ಪರಾಯಣರಾಗಿ ಕೇವಲ ಸುಖ-ಭೋಗಗಳನ್ನು ಭೋಗಿಸುವ ಉದ್ದೇಶದಿಂದಲೇ ಅನ್ಯಾಯದಿಂದ ಹಣವನ್ನು ಸಂಗ್ರಹಿಸುವ ಪ್ರಯತ್ನ ಮಾಡುತ್ತಿರುತ್ತಾರೆ. ॥೧೨॥

**ಅವರ ಮನೋರಥಗಳು ಹೇಗಿರುತ್ತವೆ ?**

ಇಂದು ನಾವು ಇಷ್ಟು ಹಣವನ್ನು ಪಡೆದಿದ್ದೇವೆ ಮತ್ತು ಈಗ ಇಂತಹ ಮನೋರಥವನ್ನು ಈಡೇರಿಸಿಕೊಳ್ಳುವೆವು. ಇಷ್ಟೊಂದು ಹಣ ನಮ್ಮ ಬಳಿಯಲ್ಲಿ ಇದೆ. ಮತ್ತಷ್ಟು ಹಣ ಆಗಬಹುದು. ಆ ಶತ್ರುವನ್ನು ನಾವು ಕೊಂದೆವು ಮತ್ತು ಬೇರೆ ಆ ಶತ್ರುಗಳನ್ನೂ ಸಹ ನಾವು ಕೊಂದು ಹಾಕುವೆವು. ನಾವು ಸರ್ವಸಮರ್ಥ ರಾಗಿದ್ದೇವೆ, ಸಿದ್ಧರು ಆಗಿದ್ದೇವೆ, ಬಲಶಾಲಿಗಳಾಗಿದ್ದೇವೆ. ಸುಖಿಗಳಾಗಿದ್ದೇವೆ ಮತ್ತು ಭೋಗಗಳನ್ನು ಭೋಗಿಸುವವರಾಗಿದ್ದೇವೆ. ನಾವು ದೊಡ್ಡ ಹಣವಂತರು. ಬಹಳಷ್ಟು ಜನರು ನಮಗೆ ಸಹಾಯಕರಾಗಿದ್ದಾರೆ. ಬೇರೆ ಯಾರು ನಮಗೆ ಸಮಾನರಾಗಬಲ್ಲರು? ನಾವು ತುಂಬಾ ಯಜ್ಞಮಾಡುವೆವು, ದಾನ ಕೊಡುವೆವು ಮತ್ತು ಸ್ವಚ್ಛಂದವಾಗಿರುವೆವು. ಈ ರೀತಿ ಅವರು ಅಜ್ಞಾನದಿಂದ ಮೋಹಕ್ಕೊಳಗಾಗಿ ಮನೋರಥವನ್ನು ಯೋಚಿಸುತ್ತಿರುತ್ತಾರೆ. ॥೧೩-೧೫॥

**ಪರಮಾತ್ಮಾ! ಮರಣವಾದ ನಂತರ ಇಂತಹ ಮನುಷ್ಯರ ಗತಿಯೇನಾಗುವುದು?**

ಬಗೆ-ಬಗೆಯ ಭ್ರಮೆಗಳಲ್ಲಿ ಸಿಕ್ಕಿರುವ, ಮೋಹಜಾಲದಲ್ಲಿ ಸಿಕ್ಕಿಬಿದ್ದಿರುವ ಹಾಗೂ ಪದಾರ್ಥಗಳ ಸಂಗ್ರಹ ಮತ್ತು ಭೋಗಾಸಕ್ತರಾಗಿರುವ ಆ ಮನುಷ್ಯರು ಭಯಂಕರವಾದ ನರಕಗಳಲ್ಲಿ ಬೀಳುತ್ತಾರೆ. ॥೧೬॥

**ಭೋಗಗಳಲ್ಲಿ ಆಸಕ್ತರಾದ ಆ ಆಸುರೀ ಸಂಪತ್ತುಗಳುಳ್ಳ ಮನುಷ್ಯರನ್ನು ಪತನಗೊಳಿಸುವ ಭಾವಗಳು ಯಾವುವು ?**

ಅವರು ತಮ್ಮನ್ನೇ ಪೂಜ್ಯ (ಶ್ರೇಷ್ಠ) ಎಂದು ಭಾವಿಸುವವರು, ಜಂಭ ಪಡುವುದು ಹಾಗೂ ಧನ ಮತ್ತು ಮಾನಗಳ ಗರ್ವದಲ್ಲಿ ಮಗ್ನರಾಗಿರುವವರಾಗುತ್ತಾರೆ.

**ಅಂತಹ ಜನ ಶುಭ ಕರ್ಮಗಳನ್ನೂ ಸಹ ಮಾಡಬಲ್ಲರೋ - ಪರಮಾತ್ಮಾ?**

ಹೌದು, ಅವರು ಯಜ್ಞವೇ ಮುಂತಾದ ಶುಭ ಕರ್ಮಗಳನ್ನೇನೋ ಮಾಡುತ್ತಾರೆ, ಆದರೆ ಆಡಂಬರಕ್ಕಾಗಿ ಮತ್ತು ಅವಿಧಿಪೂರ್ವಕ ಹಾಗೂ ಹೆಸರಿಗೆ ಮಾತ್ರ ಮಾಡುತ್ತಾರೆ. ॥೧೭॥

**ಅವರು ಹೀಗೆ ಏಕೆ ಮಾಡುತ್ತಾರೆ?**

ಏಕೆಂದರೆ ಅವರು ಅಹಂಕಾರ, ಹಟ, ಗರ್ವ, ಕಾಮ ಮತ್ತು ಕ್ರೋಧ ಇತ್ಯಾದಿಗಳನ್ನು ಆಶ್ರಯಿಸಿಕೊಂಡಿರುತ್ತಾರೆ.

**ಪರಮಾತ್ಮಾ ! ಅವರಿಗೆ ಇನ್ನೂ ಯಾವ ಭಾವಗಳಿರುತ್ತವೆ ?**

ಆ ಮನುಷ್ಯರು ತಮ್ಮ ಮತ್ತು ಇತರರ ಶರೀರಗಳಲ್ಲಿರುವ ಅಂತರ್ಯಾಮಿಯಾದ ನನ್ನೊಡನೆ ದ್ವೇಷ ಮಾಡುತ್ತಾರೆ ಹಾಗೂ ನನ್ನ ಮತ್ತು ಇತರರ ಗುಣಗಳಲ್ಲಿ ದೋಷ - ದೃಷ್ಟಿಯನ್ನಿಟ್ಟಿರುತ್ತಾರೆ. ॥೧೮॥

**ಪರಮಾತ್ಮಾ ! ಅಂತಹ ಆಸುರೀ ಭಾವಗಳ ಪರಿಣಾಮ ಏನಾಗುತ್ತದೆ ?**

ದ್ವೇಷಿಸುವ, ಕ್ರೂರ ಸ್ವಭಾವದ ಮತ್ತು ಪ್ರಪಂಚದಲ್ಲಿ ಮಹಾ ನೀಚ ಮತ್ತು ಅಪವಿತ್ರರಾದ ಆ ಮನುಷ್ಯರನ್ನು ನಾನು ಪದೇ - ಪದೇ ನಾಯಿ, ಕತ್ತೆ, ಹುಲಿ, ಕಾಗೆ, ಗೂಬೆ, ರಣಹದ್ದು, ಹಾವು ಚೇಳು ಮುಂತಾದ ಆಸುರೀ ಯೋನಿಗಳಲ್ಲಿ ಹಾಕುತ್ತೇನೆ. ॥೧೯॥

**ಪುನಃ ಏನಾಗುತ್ತದೆ ?**

ಎಲೈ ಕುಂತೀನಂದನ ! ಆ ಮೂಢ ಮನುಷ್ಯರು ನನ್ನನ್ನು ಪಡೆಯದೆ ಜನ್ಮ-ಜನ್ಮಾಂತರಗಳಲ್ಲಿ ಆಸುರೀ ಯೋನಿಗಳನ್ನು ಪಡೆಯುತ್ತಾರೆ ಮತ್ತು ಪುನಃ ಅದಕ್ಕಿಂತಲೂ ಸಹ ಹೆಚ್ಚಾದ ಅಧಮ ಗತಿಗೆ ಅರ್ಥಾತ್ ಭಯಂಕರ ನರಕಗಳಿಗೆ ಹೋಗುತ್ತಾರೆ. ॥೨೦॥

**ಪರಮಾತ್ಮಾ! ಅವರು ಅಧಮ ಯೋನಿಗೆ ಮತ್ತು ಅಧಮ ಗತಿಗೆ (ನರಕಕ್ಕೆ) ಹೋಗುವುದಕ್ಕೆ ಪ್ರಧಾನವಾದ ಕಾರಣವೇನು ?**

ಕಾಮ, ಕ್ರೋಧ ಮತ್ತು ಲೋಭ - ಈ ಮೂರು ಬಗೆಯ ನರಕದ ಬಾಗಿಲುಗಳೂ ಮನುಷ್ಯನನ್ನು ಪತನಗೊಳಿಸುವಂತಹುಗಳು. ಆದುದರಿಂದ ಈ ಮೂರನ್ನು ತ್ಯಾಗ ಮಾಡಬೇಕು. ॥೨೧॥

**ಇವುಗಳ ತ್ಯಾಗಮಾಡುವುದರಿಂದ ಏನಾಗುತ್ತದೆ?**

ಎಲೈ ಕೌಂತೇಯ! ಯಾವ ಮನುಷ್ಯನು ನರಕದ ಈ ಮೂರು ದ್ವಾರಗಳಿಂದ ರಹಿತನಾಗಿ ತನ್ನ ಶ್ರೇಯಸ್ಸಿನ ಆಚರಣೆ ಮಾಡುತ್ತಾನೆಯೋ ಅರ್ಥಾತ್ ಯಾರು ಶಾಸ್ತ್ರನಿಷಿದ್ಧವಾದ ಆಚರಣೆಯನ್ನು ತ್ಯಾಗಮಾಡಿ ಕೇವಲ ತನ್ನ ಶ್ರೇಯಸ್ಸಿನ ಉದ್ದೇಶದಿಂದ ನಿಷ್ಕಾಮಭಾವಪೂರ್ವಕ ವಿಹಿತ ಆಚರಣೆ ಮಾಡುತ್ತಾನೆಯೋ, ಅವನು ಪರಮಗತಿಯನ್ನು ಹೊಂದುತ್ತಾನೆ. ॥೨೨॥

**ಯಾರಿಗೆ ಪರಮಗತಿ ದೊರೆಯುವುದಿಲ್ಲ?**

ಯಾರು ಶಾಸ್ತ್ರದ ವಿಧಿ - ವಿಧಾನಗಳನ್ನು ಬಿಟ್ಟು ತನ್ನ ಇಚ್ಛೆಬಂದಂತೆ ಮನಸ್ವೀ ಆಚರಣೆ ಮಾಡುತ್ತಾನೆಯೋ ಅರ್ಥಾತ್ ತನ್ನ ಮನಸ್ಸಿನಲ್ಲಿ ಯಾವ ಕೆಲಸವು ಒಳ್ಳೆಯದೆಂದು ತಿಳಿಯುತ್ತಾನೆಯೋ, ಅದನ್ನು ಮಾಡುತ್ತಾನೆ ಮತ್ತು ಯಾವುದನ್ನು ಒಳ್ಳೆಯದೆಂದು ತಿಳಿಯುವುದಿಲ್ಲವೋ ಅದನ್ನು ಮಾಡುವುದಿಲ್ಲ, ಅಂತಹ ಮನುಷ್ಯನಿಗೆ ಸಿದ್ಧಿಯೂ (ಅಂತಃಕರಣದ ಶುದ್ಧಿ) ದೊರೆಯುವುದಿಲ್ಲ, ಸುಖ ದೊರೆಯುವುದಿಲ್ಲ ಮತ್ತು ಪರಮಗತಿಯೂ ಕೂಡಾ ಪ್ರಾಪ್ತವಾಗುವುದಿಲ್ಲ. ॥೨೩॥

**ಒಳ್ಳೆಯದು ಮತ್ತು ಕೆಟ್ಟದು ಎಂಬ ಕಾರ್ಯವನ್ನು ಗುರುತಿಸುವುದು ಹೇಗೆ?**

ಕರ್ತವ್ಯ ಮತ್ತು ಅಕರ್ತವ್ಯಗಳ ವಿಷಯದಲ್ಲಿ ಶಾಸ್ತ್ರವೇ ಪ್ರಮಾಣವಾಗಿದೆ - ಎಂಬುದಾಗಿ ತಿಳಿದುಕೊಂಡು ಶಾಸ್ತ್ರ ವಿಧಿಯಿಂದ ಗೊತ್ತುಪಡಿಸಿರುವ ಕರ್ತವ್ಯ ಕರ್ಮವನ್ನೇ ನೀನು ಮಾಡಬೇಕು ಅರ್ಥಾತ್ ಶಾಸ್ತ್ರವನ್ನು ಮುಂದಿಟ್ಟುಕೊಂಡೇ ಪ್ರತಿಯೊಂದು ಕೆಲಸವನ್ನೂ ಮಾಡಬೇಕು. ॥೨೪॥



# ಹದಿನೇಳನೇ ಅಧ್ಯಾಯವು

**ಅರ್ಜುನ ಹೇಳಿದನು - ಹೇ ಕೃಷ್ಣ! ಯಾವ ಮನುಷ್ಯರು ಶಾಸ್ತ್ರವಿಧಿಯನ್ನು ತಿಳಿಯದೆ ಶ್ರದ್ಧಾಪೂರ್ವಕ ಯಜ್ಞ - ಪೂಜೆ ಮಾಡುತ್ತಾರೆಯೋ, ಅವರ ಶ್ರದ್ಧೆಯು ಸಾತ್ತ್ವಿಕವೋ ಅಥವಾ ರಾಜಸವೋ ಇಲ್ಲವೇ ತಾಮಸವೋ? ॥೧॥**

ಶ್ರೀಕೃಷ್ಣ ಪರಮಾತ್ಮ ಹೇಳಿದನು - ಮನುಷ್ಯರ ಸ್ವಭಾವದಿಂದ ಉತ್ಪತ್ತಿಯಾಗುವ ಶ್ರದ್ಧೆಯು ಸಾತ್ತ್ವಿಕ, ರಾಜಸ ಮತ್ತು ತಾಮಸ - ಎಂದು ಮೂರು ಬಗೆಯಾಗಿರುತ್ತದೆ ॥೨॥

**ಸ್ವಭಾವದಿಂದಲೇ ಉಂಟಾದ ಆ ಶ್ರದ್ಧೆಯು ಏಕೆ ಮೂರು ಪ್ರಕಾರವಾಗಿರುತ್ತದೆ?**

ಎಲೈ ಅರ್ಜುನ ! ಎಲ್ಲಾ ಮನುಷ್ಯರ ಶ್ರದ್ಧೆಯು ಅವರವರ ಅಂತಃಕರಣಕ್ಕೆ ಅನುರೂಪವಾಗಿರುತ್ತದೆ. ಈ ಮನುಷ್ಯನು ಶ್ರದ್ಧಾಮಯನಾಗಿದ್ದಾನೆ. ಆದುದರಿಂದ ಯಾರು ಎಂತಹ ಶ್ರದ್ಧಾವಂತನೋ, ಅವನ ಸ್ವರೂಪವು ಅಂತಹುದೇ ಆಗಿರುತ್ತದೆ ಅರ್ಥಾತ್ ಅವನ ನಿಷ್ಠೆ (ಸ್ಥಿತಿ)ಯು ಅಂತಹುದೇ ಆಗಿರುತ್ತದೆ. ॥೩॥

**ಆ ಶ್ರದ್ಧೆ (ನಿಷ್ಠೆ)ಯ ಪರಿಚಯ ಹೇಗಿರುತ್ತದೆ ?**

ಸಾತ್ತ್ವಿಕ ಮನುಷ್ಯರು ದೇವತೆಗಳ ಪೂಜೆ ಮಾಡುತ್ತಾರೆ. ರಾಜಸ ಮನುಷ್ಯರು ಯಕ್ಷ ಮತ್ತು ರಾಕ್ಷಸರನ್ನೂ ಹಾಗೂ ತಾಮಸ ಮನುಷ್ಯರು ಭೂತ -ಪ್ರೇತಗಳನ್ನೂ ಪೂಜೆ ಮಾಡುತ್ತಾರೆ. ॥೪॥

**ಪರಮಾತ್ಮಾ! ಅಶ್ರದ್ಧಾವಂತರಾದ ಮನುಷ್ಯರನ್ನು ಕಂಡುಹಿಡಿಯುವುದು ಹೇಗೆ ?**

ಅಶ್ರದ್ಧೆಯುಳ್ಳ ಮನುಷ್ಯರು ದಂಭ, ಅಹಂಕಾರ, ಕಾಮನೆ, ಆಸಕ್ತಿ ಮತ್ತು ಹಟದಿಂದ ಕೂಡಿದವರಾಗಿ ಶಾಸ್ತ್ರವಿಧಿಗಳನ್ನು ಬಿಟ್ಟು ಘೋರವಾದ ತಪಸ್ಸನ್ನು ಮಾಡುತ್ತಾರೆ ಮತ್ತು ತಮ್ಮ ಪಾಂಚ -ಭೌತಿಕ ಶರೀರಕ್ಕೂ ಹಾಗೂ (ನನಗೆ ವಿರುದ್ಧವಾಗಿ ನಡೆದುಕೊಂಡು) ಅಂತಃಕರಣದಲ್ಲಿರುವ ನನಗೂ ಸಹ ಕಷ್ಟಕೊಡುತ್ತಾರೆ. ಇಂತಹ ಅಜ್ಞಾನೀ ಮನುಷ್ಯರನ್ನು ನೀನು ಆಸುರ ಸ್ವಭಾವವುಳ್ಳವರೆಂದು ತಿಳಿ. ॥೫-೬॥

**ಇದುವರೆಗೂ ನೀನು ಪೂಜೆ ಮತ್ತು ತಪಸ್ಸಿನಿಂದ ಶ್ರದ್ಧಾವಂತ ಮತ್ತು ಅಶ್ರದ್ಧಾವಂತರಾದ ಮನುಷ್ಯರನ್ನು ಗುರುತಿಸುವ ಬಗೆಯನ್ನು ತಿಳಿಸಿದೆ. ಆದರೆ ಪೂಜೆ, ತಪಸ್ಸು ಮುಂತಾದುವನ್ನು ಮಾಡದೇ ಇರುವವರನ್ನು ಕಂಡುಕೊಳ್ಳುವುದು ಹೇಗೆ ?**

ಭೋಜನದ ರುಚಿಯಿಂದ ಅವರ ಪರಿಚಯವಾಗಬಹುದು; ಏಕೆಂದರೆ

ಭೋಜನವನ್ನೇನೋ ಎಲ್ಲರೂ ಮಾಡುತ್ತಾರೆ; ಆದುದರಿಂದ ಎಲ್ಲರಿಗೂ ಆಹಾರವೂ ಸಹ ಮೂರು ಬಗೆಯಲ್ಲಿ ಪ್ರಿಯವಾಗುತ್ತದೆ. ಹಾಗೆಯೇ ಯಜ್ಞ, ತಪಸ್ಸು ಮತ್ತು ದಾನ ಸಹ ಮೂರು ರೀತಿಯಲ್ಲಿ ಪ್ರಿಯವಾಗುತ್ತವೆ. ಅವುಗಳ ಭೇದಗಳನ್ನು ನೀನು ಕೇಳು. ॥೭॥

**ಸಾತ್ತ್ವಿಕ ಮನುಷ್ಯರಿಗೆ ಯಾವ ಬಗೆಯ ಆಹಾರದಲ್ಲಿ ಅಭಿರುಚಿಯಿರುತ್ತದೆ ?**

ಆಯುಸ್ಸು, ಸತ್ತ್ವಗುಣ, ಬಲ ಆರೋಗ್ಯ, ಸುಖ ಮತ್ತು ಪ್ರಸನ್ನತೆಯನ್ನು ವೃದ್ಧಿಪಡಿಸುವ, ಸ್ಥಿರವಾಗಿರುವ, ಹೃದಯಕ್ಕೆ ಬಲಕೊಡುವ, ರಸಯುಕ್ತ ಮತ್ತು ಸ್ನಿಗ್ಧ (ತುಪ್ಪದಿಂದ ತಯಾರಾದ) ಇಂತಹ ಭೋಜನ ಪದಾರ್ಥಗಳು ಸಾತ್ತ್ವಿಕ ಮನುಷ್ಯರಿಗೆ ಪ್ರಿಯವಾಗುತ್ತವೆ. ॥೮॥

**ರಾಜಸ ಮನುಷ್ಯರಿಗೆ ಯಾವ ಆಹಾರದಲ್ಲಿ ಅಭಿರುಚಿಯಿರುತ್ತದೆ ?**

ಹೆಚ್ಚು ಕಹಿ, ಹುಳಿ, ಉಪ್ಪುಳ್ಳದ್ದು, ಅತಿಬಿಸಿ, ಖಾರ, ಒಣಗಿದ್ದು ಮತ್ತು ದಾಹವುಂಟುಮಾಡುವ ಭೋಜನ ಪದಾರ್ಥಗಳು ರಾಜಸ ಮನುಷ್ಯರಿಗೆ ಪ್ರಿಯವಾಗುತ್ತವೆ; ಅವುಗಳೆಲ್ಲಾ ದುಃಖ, ಶೋಕ ಮತ್ತು ರೋಗಾದಿಗಳನ್ನು ಉತ್ಪತ್ತಿಮಾಡುವಂತಹುವುಗಳಾಗಿವೆ. ॥೯॥

**ತಾಮಸ ಮನುಷ್ಯರಿಗೆ ಎಂತಹ ಆಹಾರದಲ್ಲಿ ಅಭಿರುಚಿಯಿರುತ್ತದೆ ?**

ಸರಿಯಾಗಿ ಪಕ್ವವಾಗದಿರುವ, ರಸಹೀನವಾದ, ದುರ್ಗಂಧಮಯವಾದ (ಮದ್ಯ, ಈರುಳ್ಳಿ, ಬೆಳ್ಳುಳ್ಳಿ ಇತ್ಯಾದಿ) ಹಳಸಿದ, ತಿಂದುಳಿದ ಮತ್ತು ಮಹಾ ಅಪವಿತ್ರವಾದ (ಮಾಂಸ, ಮೀನು, ಮೊಟ್ಟೆ ಇತ್ಯಾದಿ) ಭೋಜನದ ಪದಾರ್ಥಗಳು ತಾಮಸ ಮನುಷ್ಯರಿಗೆ ಪ್ರಿಯವಾಗುತ್ತವೆ. ॥೧೦॥

**ನೀನು ಈ ಮೊದಲು ಯಜ್ಞ, ತಪಸ್ಸು ಮತ್ತು ದಾನದಲ್ಲಿಯೂ ಸಹ ಇರುವ ಮೂರು ಮೂರು ಭೇದಗಳನ್ನು ಕೇಳೆಂದು ಅಪ್ಪಣೆ ಕೊಟ್ಟಿದ್ದೆ* ಆದುದರಿಂದ ಈಗ ಯಜ್ಞ ಮೂರು ಬಗೆಯಾಗಿ ಹೇಗಿರುತ್ತದೆಂಬುದನ್ನು ತಿಳಿಸು ?**

ಯಜ್ಞ ಮಾಡುವುದು ಕರ್ತವ್ಯವಾಗಿದೆ ಈ ರೀತಿಯಾಗಿ ಮನಸ್ಸನ್ನು

* ಮೊದಲು ಯಜ್ಞ-ಪೂಜೆ ಮತ್ತು ಭೋಜನದ ಮೂಲಕ ಶ್ರದ್ಧೆಯ ಗುರುತನ್ನು ತಿಳಿಸಿದೆ. ಅದರಿಂದ ಶಾಸ್ತ್ರವಿಧಿಯನ್ನು ತಿಳಿಯದೆ ಅಜ್ಞಾನದಿಂದ ತ್ಯಾಗ ಮಾಡುವವರ ಪರಿಚಯವೇನೋ ಆಯಿತು. ಆದರೆ ಯಾವ ಮನುಷ್ಯರು ಶಾಸ್ತ್ರವಿಧಿಗೆ ಅನುಸಾರವಾಗಿ ಯಜ್ಞಾದಿ ಶುಭ ಕರ್ಮಮಾಡುತ್ತಾರೆಯೋ, ಅವರ ಪರಿಚಯು ಹೇಗೆ ಆಗುತ್ತದೆ - ಇದನ್ನು ತಿಳಿಸುವುದಕ್ಕಾಗಿ ಭಗವಂತನು ಯಜ್ಞ, ತಪಸ್ಸು ಮತ್ತು ದಾನದ ಮೂರು - ಮೂರು ಭೇದಗಳನ್ನು ಕೇಳು ಎಂದು ಆಜ್ಞೆಮಾಡಿದ್ದಾನೆ.

ದೃಢಪಡಿಸಿಕೊಂಡು ಫಲಾಪೇಕ್ಷೆಯಿಲ್ಲದೆ ಮನುಷ್ಯರ ಮೂಲಕ ಶಾಸ್ತ್ರವಿಧಿಗೆ ಅನುಸಾರವಾಗಿ ಮಾಡಲಾಗುವ ಯಜ್ಞವು ಸಾತ್ತ್ವಿಕವಾಗಿರುತ್ತದೆ. ॥೧೧॥

**ಪರಮಾತ್ಮಾ ! ರಾಜಸ ಯಜ್ಞವು ಹೇಗಿರುತ್ತದೆ?**

ಎಲೈ ಭರತಶ್ರೇಷ್ಠ ಅರ್ಜುನ ! ಯಾವ ಯಜ್ಞವು ಫಲದ ಇಚ್ಛೆಯಿಂದ ಅರ್ಥಾತ್ ತನ್ನ ಸ್ವಾರ್ಥಕ್ಕಾಗಿ ಮಾಡಲಾಗುವುದೋ ಅಥವಾ ಕೇವಲ ಜನರಿಗೆ ತೋರಿಸಿಕೊಳ್ಳುವುದಕ್ಕಾಗಿ ಮಾಡಲಾಗುವುದೋ, ಅದನ್ನು ನೀನು ರಾಜಸವೆಂದು ತಿಳಿದುಕೋ. ॥೧೨॥

**ತಾಮಸ ಯಜ್ಞ ಯಾವ ರೀತಿಯಲ್ಲಿರುತ್ತದೆ ?**

ಶಾಸ್ತ್ರ ವಿಧಿಯನ್ನು ಬಿಟ್ಟು, ಅನ್ನ-ದಾನವಿಲ್ಲದೆ, ಮಂತ್ರಗಳೂ ಇಲ್ಲದೆ, ದಕ್ಷಿಣೆಯೂ ಇಲ್ಲದೆ ಮತ್ತು ಶ್ರದ್ಧೆಯೂ ಇಲ್ಲದೆ ಮಾಡಲಾಗುವ ಯಜ್ಞವನ್ನು ತಾಮಸವೆಂದು ಹೇಳುತ್ತಾರೆ. ॥೧೩॥

**ಭಗವಂತ ! ಈಗ ತಪಸ್ಸು ಎಷ್ಟು ಪ್ರಕಾರದ್ದಾಗಿದೆ ಎಂಬುದನ್ನು ತಿಳಿಸು ?**

ತಪಸ್ಸು ಮೂರು ಪ್ರಕಾರವಾಗಿದೆ - ಶಾರೀರಿಕ, ವಾಚಿಕ ಮತ್ತು ಮಾನಸಿಕ. ದೇವತೆಗಳು, ಬ್ರಾಹ್ಮಣರು, ಗುರುಜನರು ಮತ್ತು ಜೀವನ್ಮುಕ್ತ ಮಹಾಪುರುಷರುಗಳನ್ನು ಪೂಜಿಸುವುದು, ಜಲ, ಮೃತ್ತಿಕೆ ಮುಂತಾದುವುಗಳಿಂದ ಶರೀರವನ್ನು ಪವಿತ್ರಗೊಳಿಸುವುದು, ಶಾರೀರಿಕ ಕ್ರಿಯೆಗಳನ್ನು ಪ್ರಾಮಾಣಿಕ ಹಾಗೂ ಸರಳವಾಗಿಟ್ಟುಕೊಳ್ಳುವುದು ಅರ್ಥಾತ್ ಗರ್ವ - ದ್ವೇಷಾಸೂಯೆಗಳನ್ನು ಇಟ್ಟುಕೊಳ್ಳದಿರುವುದು; ಬ್ರಹ್ಮಚರ್ಯ ಪಾಲನೆ ಮತ್ತು ಶಾರೀರಿಕವಾಗಿ ಯಾರಿಗೂ ಸಹ ಯಾವುದೇ ರೀತಿಯ ಕಷ್ಟ ಕೊಡದೇ ಇರುವುದು - ಇದು ಶಾರೀರಿಕ ತಪಸ್ಸು ಆಗಿದೆ. ॥೧೪॥

**ವಾಚಿಕ ತಪಸ್ಸು ಹೇಗಿರುತ್ತದೆ ?**

ಉದ್ವೇಗವಿಲ್ಲದಿರುವ, ಸತ್ಯ, ಪ್ರಿಯ ಮತ್ತು ಹಿತಕರವಾದ ಮಾತುಗಳನ್ನಾಡುವುದು; ಸ್ವಾಧ್ಯಾಯ ಮಾಡುವುದು ಮತು ಅಭ್ಯಾಸ (ನಾಮಜಪ ಇತ್ಯಾದಿ) ಮಾಡುವುದು - ಇದು ವಾಚಿಕ ತಪಸ್ಸಾಗಿದೆ. ॥೧೫॥

**ಮಾನಸಿಕ ತಪಸ್ಸು ಹೇಗಿರುತ್ತದೆ ?**

ಮನಸ್ಸಿನ ಪ್ರಸನ್ನತೆ, ಸೌಮ್ಯಭಾವ, ಮನನಶೀಲತೆ, ಮನೋನಿಗ್ರಹ ಮತ್ತು ಭಾವಗಳ ಶುದ್ಧಿ - ಇದು ಮನಸ್ಸಿನ ತಪಸ್ಸು ಆಗಿದೆ. ॥೧೬॥

ಮೇಲೆ ತಿಳಿಸಿದ ಮೂರು ಬಗೆಯ ತಪಸ್ಸನ್ನೂ ಪರಮ ಶ್ರದ್ಧೆಯಿಂದೊಡಗೂಡಿ

ಫಲಾಪೇಕ್ಷೆಯಿಲ್ಲದೆ ಮನುಷ್ಯರು ಆಚರಿಸಿದರೆ ಅದನ್ನು ಸಾತ್ತ್ವಿಕ ತಪಸ್ಸೆಂದು ಹೇಳಲಾಗುತ್ತದೆ. ॥೧೭॥

**ಪರಮಾತ್ಮಾ ! ರಾಜಸ ತಪಸ್ಸು ಯಾವುದು ?**

ತನ್ನ ಸತ್ಕಾರ, ಮಾನ ಮತ್ತು ಪೂಜೆಗೋಸ್ಕರ ಅಥವಾ ಇತರರಿಗೆ ತೋರಿಸಿಕೊಳ್ಳುವ ಭಾವನೆಯಿಂದ ಮಾಡಲಾಗುವ ಆ ತಪಸ್ಸು ಈ ಲೋಕದಲ್ಲಿ ಅನಿಶ್ಚಿತ ಮತ್ತು ಕ್ಷಣಿಕವಾದ ಫಲಕೊಡುವಂತಹುದು. ಅಂತಹ ತಪಸ್ಸನ್ನು ರಾಜಸವೆಂದು ಹೇಳುತ್ತಾರೆ. ॥೧೮॥

**ತಾಮಸ ತಪಸ್ಸು ಹೇಗಿರುತ್ತದೆ ?**

ಮೂಢತೆಯಿಂದೊಡಗೂಡಿ ಹಟದಿಂದ ತನಗೆ ಕಷ್ಟ ಕೊಟ್ಟುಕೊಂಡು ಅಥವಾ ಇತರರಿಗೆ ಕಷ್ಟ ಕೊಡುವುದಕ್ಕಾಗಿ ಆಚರಿಸಲಾಗುವ ಆ ತಪಸ್ಸು ತಾಮಸವಾಗುತ್ತದೆ. ॥೧೯॥

**ಭಗವಂತ ! ಮೂರು ಪ್ರಕಾರದ ದಾನ ಯಾವುದೆಂಬುದನ್ನು ಈಗ ಹೇಳು ?**

ದಾನ ಕೊಡುವುದು ಕರ್ತವ್ಯವಾಗಿದೆ - ಎಂಬ ಭಾವನೆಯಿಂದ, ಪ್ರತ್ಯುಪಕಾರದ ಭಾವನೆಯಿಂದ ರಹಿತನಾಗಿ, ದೇಶ, ಕಾಲ ಮತ್ತು ಸತ್ಪಾತ್ರರು ದೊರೆತಾಗ ಕೊಡಲಾಗುವ ಆ ದಾನವು ಸಾತ್ತ್ವಿಕವಾಗುತ್ತದೆ. ॥೨೦॥

**ರಾಜಸ ದಾನವು ಯಾವುದು ?**

ಪ್ರತ್ಯುಪಕಾರವನ್ನು ಪಡೆದುಕೊಳ್ಳುವುದಕ್ಕಾಗಿ ಅಥವಾ ಫಲಾಪೇಕ್ಷೆಯನ್ನೂ ಇಟ್ಟುಕೊಂಡು 'ಕೊಡಬೇಕಾಗಿದೆಯಲ್ಲ' ಹೀಗೆ - ದುಃಖಪೂರ್ವಕವಾಗಿ ಕೊಡಲಾಗುವ ದಾನವು ರಾಜಸವಾಗುತ್ತದೆ. ॥೨೧॥

**ತಾಮಸ ದಾನವು ಯಾವುದು ?**

ಸತ್ಕಾರವಿಲ್ಲದೆ ಹಾಗೂ ತಿರಸ್ಕಾರ ಪೂರ್ವಕ ಯೋಗ್ಯವಲ್ಲದ ದೇಶ ಮತ್ತು ಕಾಲದಲ್ಲಿ ಕುಪಾತ್ರರಿಗೆ ಕೊಡುವ ಆ ದಾನವು ತಾಮಸವಾಗುತ್ತದೆ. ॥೨೨॥

**ಶ್ರದ್ಧಾವಂತ ಮನುಷ್ಯನು ಶಾಸ್ತ್ರವಿಹಿತವಾದ ಯಜ್ಞ, ತಪಸ್ಸು ಮತ್ತು ದಾನದ ಕ್ರಿಯೆಗಳನ್ನು ಹೇಗೆ ಪ್ರಾರಂಭಿಸಬೇಕು ? ಮಹಾಪ್ರಭು !**

ಓಂ, ತತ್ ಮತ್ತು ಸತ್ - ಎಂಬೀ ಮೂರೂ ಹೆಸರುಗಳಿಂದ ಪರಮಾತ್ಮನನ್ನು ಉಲ್ಲೇಖಿಸಲಾಗಿದೆ. ಆ ಪರಮಾತ್ಮನೇ ಸೃಷ್ಟಿಯ ಪ್ರಾರಂಭದಲ್ಲಿ ವೇದಗಳ, ಬ್ರಾಹ್ಮಣರ ಮತ್ತು ಯಜ್ಞಗಳ ರಚನೆ ಮಾಡಿದ್ದಾನೆ. ಆದುದರಿಂದ ಪರಮಾತ್ಮನ ಹೆಸರನ್ನು ಹೇಳಿಯೇ ಯಜ್ಞಾದಿ ಕ್ರಿಯೆಗಳನ್ನು ಪ್ರಾರಂಭ ಮಾಡಬೇಕು. ॥೨೩॥

**'ಓಂ' ಕಾರದ ಪ್ರಯೋಗ ಎಲ್ಲಿ ಆಗುತ್ತದೆ ಶ್ರೀಕೃಷ್ಣ?**

ವೈದಿಕ ಸಿದ್ಧಾಂತಗಳನ್ನು ಅನುಸರಿಸುವ ಮನುಷ್ಯರ ಶಾಸ್ತ್ರವಿಧಿಯಿಂದ ನಿಯಮಿತವಾದ ಯಜ್ಞ, ದಾನ ಮತ್ತು ತಪೋರೂಪೀ ಕ್ರಿಯೆಗಳು ಯಾವಾಗಲೂ 'ಓಂ' ಕಾರದ ಉಚ್ಚಾರಣೆಯಿಂದಲೇ ಪ್ರಾರಂಭವಾಗುತ್ತವೆ. ॥೨೪॥

**'ತತ್' ಎಂಬುದರ ಪ್ರಯೋಗ ಎಲ್ಲಿ ಆಗುತ್ತದೆ ?**

'ತತ್' ಎಂಬ ನಾಮದಿಂದ ಹೇಳಿರುವ ಪರಮಾತ್ಮನಿಗಾಗಿಯೇ ಸರ್ವಸ್ವವೂ ಇದೆ. ಹೀಗೆ ತಿಳಿದುಕೊಂಡು ಮುಕ್ತಿಯನ್ನು ಬಯಸುವ ಮನುಷ್ಯರ ಮೂಲಕ ಫಲಾಪೇಕ್ಷೆಯನ್ನು ತ್ಯಜಿಸಿ ಅನೇಕ ಪ್ರಕಾರದ ಯಜ್ಞ, ತಪಸ್ಸು ಮತ್ತು ದಾನರೂಪೀ ಕ್ರಿಯೆಗಳು ಮಾಡಲಾಗುತ್ತವೆ. ॥೨೫॥

**'ಸತ್' ಎಂಬುದು ಎಲ್ಲಿ ಪ್ರಯೋಗವಾಗುತ್ತದೆ ?**

ಎಲೈ ಪಾರ್ಥ ! ಪರಮಾತ್ಮನ 'ಸತ್' ಎಂಬ ಈ ನಾಮವು 'ಸತ್ತಾ' (ಅಸ್ತಿತ್ವ) ಮಾತ್ರದಲ್ಲಿ ಮತ್ತು 'ಶ್ರೇಷ್ಠ' ಭಾವದಲ್ಲಿಯೂ ಪ್ರಯೋಗಿಸಲಾಗುತ್ತದೆ. ಪ್ರಶಂಸನೀಯ (ಶ್ರೇಷ್ಠ) ಕರ್ಮಗಳೊಡನೆಯೂ 'ಸತ್' ಎಂಬ ಶಬ್ದವು ಸೇರಿಸಲಾಗುತ್ತದೆ. ಅಲ್ಲದೆ ಯಜ್ಞ, ತಪಸ್ಸು ಮತ್ತು ದಾನದಲ್ಲಿನ ಮನುಷ್ಯರ ಸ್ಥಿತಿಯೂ (ನಿಷ್ಠೆ ಶ್ರದ್ಧೆ) ಸಹ 'ಸತ್' ಎಂದು ಹೇಳಲಾಗುತ್ತದೆ. ಇಷ್ಟೊಂದು ಹೇಳಬಹುದು, ಆ ಪರಮಾತ್ಮನಿಗಾಗಿ ಮಾಡುವ ಕರ್ಮಗಳೆಲ್ಲವೂ 'ಸತ್' ಎಂದೇ ಹೇಳುತ್ತಾರೆ. ॥೨೬-೨೭॥

**ಭಗವಂತ ! ಯಾವ ಕರ್ಮಗಳನ್ನು 'ಅಸತ್' ಎಂದು ಹೇಳುತ್ತಾರೆ ?**

ಎಲೈ ಪಾರ್ಥ ! ಅಶ್ರದ್ಧೆಯಿಂದ ಮಾಡಲಾದ ಹೋಮ, ಕೊಟ್ಟ ದಾನ ಮತ್ತು ಆಚರಿಸಿದ ತಪಸ್ಸು ಹಾಗೂ ಇನ್ನಿತರೇ ಕರ್ಮಗಳೆಲ್ಲವೂ 'ಅಸತ್' ಎಂದೇ ಹೇಳಲ್ಪಡುತ್ತವೆ. ಅವುಗಳ ಫಲ ಇಲ್ಲಿಯೂ ಉಂಟಾಗುವುದಿಲ್ಲ ಮತ್ತು ಮರಣದ ನಂತರವೂ ಉಂಟಾಗುವುದಿಲ್ಲ. ಅರ್ಥಾತ್ ಅದಕ್ಕೆ ಎಲ್ಲಿಯೂ ಸಹ ಸತ್ಫಲ ದೊರೆಯುವುದಿಲ್ಲ. ॥೨೮॥



# ಹದಿನೆಂಟನೇ ಅಧ್ಯಾಯವು

**ಅರ್ಜುನ ಹೇಳಿದನು - ಹೇ ಮಹಾಬಾಹುವೇ ! ಹೇ ಅಂತರ್ಯಾಮೀಯೇ! ಹೇ ಕೇಶಿನಿಷೂದನ ! ನಾನು ಸಂನ್ಯಾಸ (ಸಾಂಖ್ಯಯೋಗ) ಮತ್ತು ತ್ಯಾಗ (ಕರ್ಮಯೋಗ)ದ ತತ್ತ್ವವನ್ನು ಬೇರೆ-ಬೇರೆ ತಿಳಿಯ ಬಯಸುತ್ತೇನೆ. ||೧||**

ಶ್ರೀಕೃಷ್ಣ ಹೇಳಿದನು - ನಾನು ಸಂನ್ಯಾಸ ಮತ್ತು ತ್ಯಾಗದ ವಿಷಯದಲ್ಲಿ ಬೇರೆ ದಾರ್ಶನಿಕರ ನಾಲ್ಕು ಅಭಿಪ್ರಾಯಗಳನ್ನು ತಿಳಿಸುತ್ತೇನೆ.

**ಮಹಾಪ್ರಭು ! ಆ ನಾಲ್ಕು ಅಭಿಪ್ರಾಯಗಳು ಯಾವುವು?**

೧. ಕೆಲವು ಮಂದಿ ವಿದ್ವಾಂಸರು ಕಾಮ್ಯ ಕರ್ಮಗಳ ತ್ಯಾಗವನ್ನು ಸಂನ್ಯಾಸ ಎಂದು ಹೇಳುತ್ತಾರೆ.

೨. ಕೆಲವರು ಸಂಪೂರ್ಣ ಕರ್ಮಗಳ ಫಲದ ತ್ಯಾಗವನ್ನೂ ತ್ಯಾಗವೆಂದು ಹೇಳುತ್ತಾರೆ.

೩. ಕೆಲವು ವಿದ್ವಾಂಸರು ಕರ್ಮಗಳನ್ನು ದೋಷಗಳಂತೆ ಬಿಟ್ಟು ಬಿಡಬೇಕು ಎಂದು ಹೇಳುತ್ತಾರೆ.

೪. ಯಜ್ಞ, ದಾನ ಮತ್ತು ತಪೋರೂಪೀ ಕರ್ಮಗಳನ್ನು ತ್ಯಾಗ ಮಾಡಬಾರದೆಂದು ಹಲವರು ಹೇಳುತ್ತಾರೆ. ||೨-೩||

**ಇವುಗಳಾದರೋ ದಾರ್ಶನಿಕರ ನಾಲ್ಕು ಅಭಿಪ್ರಾಯಗಳಾದವು, ಆದರೆ ಹೇ ಪರಮಾತ್ಮಾ ! ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು ?**

ಎಲೈ ಭರತವಂಶೀಯರಲ್ಲಿ ಶ್ರೇಷ್ಠನಾದ ಅರ್ಜುನ ! ಸಂನ್ಯಾಸ ಮತ್ತು ತ್ಯಾಗ-ಇವೆರಡರಲ್ಲಿ ಮೊದಲು ನೀನು ತ್ಯಾಗದ ವಿಷಯದಲ್ಲಿ ನನ್ನ ಅಭಿಪ್ರಾಯವನ್ನು ಕೇಳು ; ಏಕೆಂದರೆ ಎಲೈ ಪುರುಷಶ್ರೇಷ್ಠ ! ತ್ಯಾಗವನ್ನು ಮೂರು ಪ್ರಕಾರವೆಂದು ಹೇಳುತ್ತಾರೆ. ಯಜ್ಞ, ದಾನ ಮತ್ತು ತಪೋರೂಪೀ ಕರ್ಮಗಳ ತ್ಯಾಗವನ್ನು ಮಾಡಬಾರದು. ಒಂದು ಪಕ್ಷ ಅವುಗಳನ್ನು ಮಾಡದೇ ಹೋಗಿದ್ದರೆ ಖಂಡಿತ ಮಾಡಲೇಬೇಕು. ಅದಕ್ಕೆ ಕಾರಣವಿಷ್ಟೇ - ಅವುಗಳಲ್ಲಿ ಒಂದೊಂದು ಕರ್ಮವೂ ಮೋಕ್ಷಾಪೇಕ್ಷಿಗಳನ್ನು ಪವಿತ್ರಗೊಳಿಸುತ್ತದೆ ||೪-೫||

**ಕೇವಲ ಇಷ್ಟೇ ಕರ್ಮಗಳನ್ನು ಮಾಡಬೇಕೇ?**

ಎಲೈ ಪಾರ್ಥ ! ಈಗ ಹೇಳಿರುವ ಯಜ್ಞ, ದಾನ ಮತ್ತು ತಪೋರೂಪೀ

ಕರ್ಮಗಳನ್ನು ಹಾಗೂ ಇವುಗಳಲ್ಲದೆ ಇತರೇ ಶಾಸ್ತ್ರವಿಹಿತ ಕರ್ಮಗಳನ್ನೂ ಸಹ ಆಸಕ್ತಿ ಮತ್ತು ಫಲಾಪೇಕ್ಷೆಯನ್ನು ಬಿಟ್ಟು ಮಾಡಬೇಕು-ಇದೇ ನಿಶ್ಚಯಿಸಿದ ನನ್ನ ಉತ್ತಮ ಅಭಿಪ್ರಾಯವಾಗಿದೆ. ॥೬॥

**ಪರಮಾತ್ಮಾ ! ಮೂರು ರೀತಿಯ ತ್ಯಾಗ ಹೇಳಲಾಗಿದೆಯೋ, ಅದರ ಸ್ವರೂಪವೇನು ?**

ನಿಯತ ಕರ್ಮಗಳ ತ್ಯಾಗ ಮಾಡುವುದು ಯಾರಿಗೂ ಸಹ ಉಚಿತವಲ್ಲ;* ಮೋಹದಿಂದಾಗಿ ಇವುಗಳನ್ನು ತ್ಯಜಿಸುವುದು ತಾಮಸ ತ್ಯಾಗವಾಗಿದೆ. ॥೭॥

**ರಾಜಸ ತ್ಯಾಗದ ಸ್ವರೂಪವೇನು ?**

ಕರ್ತವ್ಯಕರ್ಮ ಮಾಡುವುದರಿಂದ ಕೇವಲ ದುಃಖವೇ ಇದೆ - ಎಂದು ತಿಳಿದುಕೊಂಡು ಶಾರೀರಿಕ ಕ್ಲೇಶದ ಭಯದಿಂದ ಕರ್ಮಗಳನ್ನು ತ್ಯಾಗಮಾಡುವುದು ರಾಜಸ ತ್ಯಾಗ. ಇಂತಹ ತ್ಯಾಗಮಾಡುವವನಿಗೆ ತ್ಯಾಗದ ಫಲವಾದ ಶಾಂತಿಯು ದೊರೆಯುವುದಿಲ್ಲ. ॥೮॥

**ಸಾತ್ತ್ವಿಕ ತ್ಯಾಗದ ಸ್ವರೂಪವೇನು ?**

ಎಲೈ ಅರ್ಜುನ ! ನಿಯತಕರ್ಮ ಮಾಡುವುದು ಮನುಷ್ಯನ ಆವಶ್ಯಕ ಕರ್ತವ್ಯವಾಗಿದೆ - ಎಂಬುದಾಗಿ ತಿಳಿದುಕೊಂಡು ಕರ್ಮಗಳ ಆಸಕ್ತಿ ಮತ್ತು ಫಲದ ಇಚ್ಛೆಯನ್ನು ತ್ಯಾಗ ಮಾಡಿ ನಿಯತ ಕರ್ಮಗಳನ್ನು ಮಾಡುವುದು ಸಾತ್ತ್ವಿಕ ತ್ಯಾಗವಾಗಿದೆ. ॥೯॥

---

* ವಿಹಿತ ಕರ್ಮ ಮತ್ತು ನಿಯತ ಕರ್ಮದಲ್ಲಿ ಏನು ವ್ಯತ್ಯಾಸವಿದೆ? ಶಾಸ್ತ್ರಗಳು ಯಾವ ಕರ್ಮಗಳನ್ನು ಮಾಡುವಂತೆ ಅಪ್ಪಣೆ ಕೊಟ್ಟಿವೆಯೋ, ಅವುಗಳೆಲ್ಲವೂ 'ವಿಹಿತ ಕರ್ಮ' ಎಂದು ಹೇಳಲ್ಪಡುತ್ತವೆ. ಆ ಎಲ್ಲಾ ವಿಹಿತ ಕರ್ಮಗಳ ಪಾಲನೆಯನ್ನು ಒಬ್ಬ ವ್ಯಕ್ತಿಯು ಮಾಡಲಾರನು; ಏಕೆಂದರೆ ಶಾಸ್ತ್ರಗಳಲ್ಲಿ ಎಲ್ಲಾ ವಾರಗಳ ಹಾಗೂ ತಿಥಿಗಳ ವ್ರತದ ವಿಧಾನ ಬರುತ್ತದೆ. ಒಂದು ವೇಳೆ ಒಬ್ಬ ಮನುಷ್ಯನೇ ಎಲ್ಲಾ ವಾರಗಳಲ್ಲಿ ಅಥವಾ ಎಲ್ಲಾ ತಿಥಿಗಳಲ್ಲಿ ವ್ರತ ಮಾಡುವನಾದರೆ ಅವನು ಭೋಜನ ಯಾವಾಗ ಮಾಡುವನು? ಇದರಿಂದ ಮನುಷ್ಯನಿಗೆ ಎಲ್ಲಾ ವಿಹಿತ ಕರ್ಮಗಳೂ ಹೊಂದಿಕೆಯಾಗುವುದಿಲ್ಲ ಎಂಬುದು ವೇದ್ಯವಾಗುತ್ತದೆ. ಆದರೆ ಆ ವಿಹಿತ ಕರ್ಮಗಳಲ್ಲಿಯೂ ಸಹ ವರ್ಣ, ಆಶ್ರಮ ಮತ್ತು ಪರಿಸ್ಥಿತಿಗೆ ಅನುಸಾರ ಯಾರಿಗೆ ಯಾವ ಕರ್ತವ್ಯ ಆವಶ್ಯಕವಾಗುತ್ತದೆಯೋ, ಅವನಿಗೆ ಅದು 'ನಿಯತ ಕರ್ಮ' ವಾಗುತ್ತದೆ. ಹೇಗೆಂದರೆ - ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ - ಈ ನಾಲ್ಕು ವರ್ಣಗಳಲ್ಲಿ ಯಾವ-ಯಾವ ವರ್ಣಕ್ಕೆ ಜೀವನೋಪಾಯ ಮತ್ತು ಶರೀರ ನಿರ್ವಾಹ ಸಂಬಂಧೀ ಎಷ್ಟು ನಿಯಮಗಳಿವೆಯೋ, ಆಯಾಯ ವರ್ಣಕ್ಕೆ ಅವುಗಳೆಲ್ಲವೂ 'ನಿಯತ ಕರ್ಮ' ಗಳಾಗಿವೆ.

**ಪರಮಾತ್ಮಾ ! ತ್ಯಾಗ ಮಾಡುವ ಮನುಷ್ಯ ಹೇಗಿರುತ್ತಾನೆ ?**

ಅವನು ಸಕಾಮ ಮತ್ತು ನಿಷಿದ್ಧ ಕರ್ಮಗಳ ತ್ಯಾಗವನ್ನೇನೋ ಮಾಡುತ್ತಾನೆ, ಆದರೆ ದ್ವೇಷಪೂರ್ವಕವಲ್ಲ ಮತ್ತು ಶಾಸ್ತ್ರ ನಿಯತ ಕರ್ತವ್ಯಕರ್ಮಗಳ ಆಚರಣೆಯನ್ನೇನೋ ಮಾಡುತ್ತಾನೆ, ಆದರೆ ಆಸಕ್ತಿಪೂರ್ವಕವಲ್ಲ. ಅಂತಹ ಬುದ್ಧಿವಂತ ತ್ಯಾಗೀ ಮನುಷ್ಯನು ಸಂದೇಹವಿಲ್ಲದವನಾಗಿ ತನ್ನ ಸ್ವರೂಪದಲ್ಲಿ ಸ್ಥಿತನಾಗಿರುತ್ತಾನೆ. ॥೧೦॥

**ಕರ್ಮಗಳನ್ನು ಮಾಡುವುದರಲ್ಲಿ ಆಸಕ್ತಿ ಇಲ್ಲದಿರಲಿ ಮತ್ತು ಬಿಡುವುದರಲ್ಲಿ ದ್ವೇಷವೂ ಇಲ್ಲದಿರಲಿ - ಇಷ್ಟೊಂದುರಗಳೆ ಮಾಡಿಕೊಳ್ಳುವುದೇಕೆ? ಸಂಪೂರ್ಣವಾಗಿ ಕರ್ಮಗಳ ತ್ಯಾಗವನ್ನೇ ಮಾಡಿಬಿಟ್ಟರೆ ?**

ದೇಹಧಾರಿ ಮನುಷ್ಯನಿಂದ ಕರ್ಮಗಳನ್ನು ಸ್ವರೂಪದಿಂದ ಸರ್ವಥಾ ತ್ಯಜಿಸಿಬಿಡಲು ಸಾಧ್ಯವೇ ಇಲ್ಲ. ಆದುದರಿಂದ ಯಾರು ಕರ್ಮಗಳ ಫಲವನ್ನು ತ್ಯಜಿಸುವನೋ, ಅವನನ್ನೇ ತ್ಯಾಗಿ ಎಂದು ಹೇಳುತ್ತಾರೆ. ॥೧೧॥

**ಪರಮಾತ್ಮಾ ! ಕರ್ಮಫಲವು ಎಷ್ಟು ಬಗೆಯಾಗಿದೆ ?**

ಕರ್ಮಫಲವು ಮೂರು ರೀತಿಯಾಗಿದೆ - ಅನುಕೂಲ ಪರಿಸ್ಥಿತಿ ಬರುವುದು ಇಷ್ಟವಾಗಿದೆ ಪ್ರತಿಕೂಲ ಪರಿಸ್ಥಿತಿ ಬರುವುದು ಅನಿಷ್ಟವಾಗಿದೆ ಹಾಗೂ ಯಾವುದರಲ್ಲಿ ಸ್ವಲ್ಪ ಭಾಗ ಇಷ್ಟವೂ ಮತ್ತು ಸ್ವಲ್ಪ ಭಾಗ ಅನಿಷ್ಟವೂ ಆಗಿರುವುದೋ, ಅದು ಮಿಶ್ರವಾದದ್ದೂ. ಈ ಮೂರು ಬಗೆಯ ಕರ್ಮಗಳ ಫಲಾಪೇಕ್ಷೆ ಇಟ್ಟುಕೊಂಡು ಕರ್ಮ ಮಾಡುವವರಿಗೆ ಮರಣದ ನಂತರವೂ ಸಹ ಕರ್ಮಫಲ ಉಂಟಾಗುತ್ತದೆ; ಆದರೆ ಫಲಾಪೇಕ್ಷೆಯನ್ನು ತ್ಯಾಗಮಾಡುವವರಿಗೆ ಎಲ್ಲಿಯೂ ಸಹ ಉಂಟಾಗುವುದಿಲ್ಲ.

**ಕರ್ಮದ ಫಲ ಮೂರು ಪ್ರಕಾರದಲ್ಲಿವೆ, ಆ ಕರ್ಮ ಆಗುವುದಕ್ಕೆ ಯಾವುದು ಕಾರಣವಾಗುತ್ತದೆ ?**

ಎಲೈ ಮಹಾಬಾಹು ಅರ್ಜುನ ! ಕರ್ಮಗಳನ್ನು ಅಂತ್ಯಗೊಳಿಸುವ ಸಾಂಖ್ಯ-ಸಿದ್ಧಾಂತದಲ್ಲಿ ಎಲ್ಲಾ ಕರ್ಮಗಳು ಸಿದ್ಧಿಯಾಗುವುದರಲ್ಲಿ ಐದು ಕಾರಣಗಳು ತಿಳಿಸಲ್ಪಟ್ಟಿವೆ. ಇವುಗಳನ್ನು ನೀನು ನನ್ನಿಂದ ತಿಳಿದುಕೊ. ॥೧೨-೧೩॥

ಶರೀರ, ಕರ್ತಾ, ಬಗೆ-ಬಗೆಯ ಕರಣ ಮತ್ತು ಅವುಗಳ ವಿವಿಧ ಪ್ರಕಾರದ ಬೇರೆ ಬೇರೆ ಕ್ರಿಯೆಗಳು ಹಾಗೂ ಸಂಸ್ಕಾರ - ಇವು ಐದು ಕಾರಣಗಳು. ಮನುಷ್ಯನು ಶರೀರ, ವಾಣಿ ಮತ್ತು ಮನಸ್ಸಿನ ಮೂಲಕ ಶಾಸ್ತ್ರವಿಹಿತ ಅಥವಾ

ಶಾಸ್ತ್ರನಿಷಿದ್ಧವಾದ ಯಾವುದೇ ಕರ್ಮ ಪ್ರಾರಂಭಿಸುತ್ತಾನೆಯೋ, ಅದಕ್ಕೆ ಇವುಗಳೈದೂ ಕಾರಣವಾಗುತ್ತವೆ. ॥೧೪-೧೫॥

**ಕರ್ಮಗಳಾಗುವುದರಲ್ಲಿ ಈ ಐದೂ ಕಾರಣವೆಂದು ತಿಳಿಸುವುದರ ತಾತ್ಪರ್ಯವೇನು ?**

ಕರ್ಮಗಳಾದರೋ ಶರೀರ, ವಾಣಿ ಮತ್ತು ಮನಸ್ಸಿನಿಂದಲೇ ನಡೆಯುತ್ತವೆ, ಆತ್ಮನಲ್ಲಿ ಕರ್ತೃತ್ವವಿರುವುದಿಲ್ಲ. ಆದರೆ ಯಾರು ಕರ್ಮಗಳ ವಿಷಯದಲ್ಲಿ ಆತ್ಮನನ್ನು ಕರ್ತೃವೆಂದು ಭಾವಿಸುತ್ತಾನೆಯೋ, ಅವನು ಬುದ್ಧಿಯಿಲ್ಲದೆ ಸರಿಯಾಗಿ ತಿಳಿಯುವುದಿಲ್ಲ; ಏಕೆಂದರೆ ಅವನ ಬುದ್ಧಿ ಶುದ್ಧವಾಗಿಲ್ಲ. ॥೧೬॥

**ಪರಮಾತ್ಮಾ! ಆತ್ಮನನ್ನು ಅಕರ್ತಾವೆಂದು ಭಾವಿಸುವುದರಿಂದ ಏನಾಗುತ್ತದೆ ?**

ಯಾರಲ್ಲಿ 'ನಾನು ಮಾಡುತ್ತೇನೆ' - ಎಂಬ ಅಹಂಕೃತಭಾವ ಇರುವುದಿಲ್ಲವೋ ಮತ್ತು ಯಾರ ಬುದ್ಧಿಯು ಕರ್ಮಗಳ ಫಲದಲ್ಲಿ ಲಿಪ್ತವಾಗಿಲ್ಲವೋ, ಅವನು ಸಮಸ್ತ ಪ್ರಾಣಿಗಳನ್ನು ಕೊಂದರೂ ಸಹ ಕೊಲ್ಲುವುದಿಲ್ಲ ಮತ್ತು ಪಾಪದಿಂದ ಬಂಧಿತನಾಗುವುದೂ ಇಲ್ಲ. ॥೧೭॥

**ಕರ್ಮಗಳೊಡನೆ ಆತ್ಮನ ಸಂಬಂಧವೇ ಇಲ್ಲದಿರುವಾಗ, ಮತ್ತೆ ಕರ್ಮಗಳು ಯಾರ ಪ್ರೇರಣೆಯಿಂದ ನಡೆಯುತ್ತವೆ ?**

ಜ್ಞಾನ,[೧] ಜ್ಞೇಯ[೨] ಮತ್ತು ಪರಿಜ್ಞಾತಾ[೩] - ಈ ಮೂರರಿಂದಲೂ ಕರ್ಮಪ್ರೇರಣೆ ಉಂಟಾಗುತ್ತದೆ ಹಾಗೂ ಕರಣ[೪] ಕರ್ಮ[೫] ಮತ್ತು ಕರ್ತಾ[೬] - ಈ ಮೂರರಿಂದಲೂ ಕರ್ಮ ಸಂಗ್ರಹವಾಗುತ್ತದೆ.* ॥೧೮॥

**ಕರ್ಮಪ್ರೇರಣೆ ಮತ್ತು ಕರ್ಮಸಂಗ್ರಹದಲ್ಲಿ ಮುಖ್ಯವಾದವು ಯಾವುವು ಮತ್ತು ಅವುಗಳ ಮುಖ್ಯ - ಮುಖ್ಯ ಭೇದಗಳು ಯಾವುವು, ಪರಮಾತ್ಮಾ ?**

ಗುಣಗಳ ಸಂಬಂಧದಿಂದ ಪ್ರತಿಯೊಂದು ಪದಾರ್ಥಗಳ ಭಿನ್ನ-ಭಿನ್ನ ಭೇದಗಳನ್ನು ಗಣನೆ ಮಾಡುವ ಶಾಸ್ತ್ರಗಳಲ್ಲಿ ಗುಣಗಳಿಗನುಸಾರವಾಗಿ ಜ್ಞಾನ,

---

* ೧. ಯಾವುದರ ಮೂಲಕ ತಿಳಿದುಕೊಳ್ಳಲಾಗುವುದೋ ಅದರ ಹೆಸರು ಜ್ಞಾನ, ೨. ತಿಳಿದುಕೊಳ್ಳಲು ಯೋಗ್ಯವಾದ ವಸ್ತುವಿನ ಹೆಸರು ಜ್ಞೇಯ, ೩. ತಿಳಿದುಕೊಳ್ಳುವವನ ಹೆಸರು ಪರಿಜ್ಞಾತಾ (ಜ್ಞಾತಾ), ೪. ಯಾವ ಸಾಧನಗಳಿಂದ ಕರ್ಮಮಾಡಲಾಗುವುದೋ ಅವುಗಳ ಹೆಸರು ಕರಣ, ೫. ಮಾಡುವುದರ ಹೆಸರು ಕರ್ಮ (ಕ್ರಿಯೆ), ೬. ಕರ್ಮ ಮಾಡುವವನ ಹೆಸರು ಕರ್ತಾ (ಕರ್ತೃ).

ಕರ್ಮ ಮತ್ತು ಕರ್ತಾ ಇವುಗಳು ಮೂರು-ಮೂರು ಮುಖ್ಯ ಭೇದಗಳನ್ನು ಹೇಳಿವೆ. ಅವುಗಳನ್ನೂ ಸಹ ನೀನು ಸರಿಯಾಗಿ ಕೇಳು. ॥೧೯॥

**ಜ್ಞಾನದ ಮೂರು ಭೇದಗಳಲ್ಲಿ ಸಾತ್ತ್ವಿಕ ಜ್ಞಾನ ಯಾವುದು ?**

ಯಾವ ಜ್ಞಾನದಿಂದ ಸಾಧಕನು ಸಂಪೂರ್ಣ ವಿಭಕ್ತ ಪ್ರಾಣಿಗಳಲ್ಲಿಯೂ ವಿಭಾಗರಹಿತನಾದ ಒಬ್ಬನೇ ಆದ ಅವಿನಾಶೀ ಪರಮಾತ್ಮನನ್ನು ನೋಡುವುದಿದೆಯೋ, ಆ ಜ್ಞಾನವು ಸಾತ್ತ್ವಿಕವಾಗಿದೆ. ॥೨೦॥

**ಭಗವಂತ ! ರಾಜಸ ಜ್ಞಾನ ಯಾವುದು ?**

ಯಾವ ಜ್ಞಾನದಿಂದ ಮನುಷ್ಯನು ಸಮಸ್ತ ಪ್ರಾಣಿಗಳಲ್ಲಿಯೂ ಬೇರೆ-ಬೇರೆ ಭಾವ (ಅಸ್ತಿತ್ವ)ವನ್ನು ಭಿನ್ನ-ಭಿನ್ನವಾಗಿ ನೋಡುತ್ತಾನೋ, ಆ ಜ್ಞಾನವು ರಾಜಸವಾಗಿದೆ. ॥೨೧॥

**ತಾಮಸ ಜ್ಞಾನ ಯಾವುದು?**

ಯಾವ ಜ್ಞಾನವು ಉತ್ಪತ್ತಿಯಾಗುವ ಶರೀರದಲ್ಲಿಯೇ ಪೂರ್ಣರೂಪವಾಗಿರುವಂತೆ ಆಸಕ್ತಿ ಇದೆಯೋ ಹಾಗೂ ಯುಕ್ತಿಸಂಗತವೂ ಅಲ್ಲವೋ, ತಾತ್ತ್ವಿಕ ಜ್ಞಾನವಿಲ್ಲದುದೋ ಮತ್ತು ತುಚ್ಛವಾದುದೋ, ಅದು ತಾಮಸ ಜ್ಞಾನವಾಗಿದೆ. ॥೨೨॥

**ಮೂರು ರೀತಿಯ ಕರ್ಮಗಳಲ್ಲಿ ಸಾತ್ತ್ವಿಕ ಕರ್ಮ ಯಾವುದು, ಶ್ರೀಕೃಷ್ಣ?**

ಯಾವ ನಿಯತ ಕರ್ಮವು ಫಲದ ಇಚ್ಛೆಯಿಲ್ಲದ ಮನುಷ್ಯನಿಂದ ಆಸಕ್ತಿ,, ದ್ವೇಷ ಮತ್ತು ಕರ್ತೃತ್ವ ಅಭಿಮಾನದಿಂದ ರಹಿತನಾಗಿ ಮಾಡಲಾಗುವುದೋ ಅದು ಸಾತ್ತ್ವಿಕ ಕರ್ಮವಾಗುತ್ತದೆ. ॥೨೩॥

**ರಾಜಸ ಕರ್ಮ ಯಾವುದು ?**

ಭೋಗಗಳ ಇಚ್ಛೆಯುಳ್ಳ ಮನುಷ್ಯನಿಂದ ಅಹಂಕಾರ ಅಥವಾ ಪರಿಶ್ರಮಪೂರ್ವಕ ಮಾಡುವ ಕರ್ಮವು ರಾಜಸವಾಗುತ್ತದೆ. ॥೨೪॥

**ತಾಮಸ ಕರ್ಮ ಯಾವುದು ?**

ಪರಿಣಾಮ, ಹಾನಿ, ಹಿಂಸೆ ಮತ್ತು ತನ್ನ ಸಾಮರ್ಥ್ಯವನ್ನು ನೋಡದೆ ಕೇವಲ ಮೋಹದಿಂದ ಪ್ರಾರಂಭಮಾಡಲಾಗುವ ಕರ್ಮವು ತಾಮಸವೆಂದಾಗುತ್ತದೆ. ॥೨೫॥

**ಪರಮಾತ್ಮಾ ! ಮೂರು ವಿಧದ ಕರ್ತೃಗಳಲ್ಲಿ ಸಾತ್ತ್ವಿಕ ಕರ್ತೃವು ಯಾರು ?**

ಯಾವ ಕರ್ತೃವು ಆಸಕ್ತಿಯಿಲ್ಲದೆ, ಅಹಂಕಾರವಿಲ್ಲದೆ, ಧೈರ್ಯ ಮತ್ತು

ಉತ್ಸಾಹದೊಂದಿಗೆ ಹಾಗೂ ಕರ್ಮಗಳ ಸಿದ್ಧಿ-ಅಸಿದ್ಧಿಯಲ್ಲಿ ನಿರ್ವಿಕಾರ ನಾಗಿರುವವನು ಸಾತ್ತ್ವಿಕ ಕರ್ತೃವೆನಿಸುತ್ತಾನೆ. ॥೨೬॥

**ರಾಜಸ ಕರ್ತೃವು ಯಾರು ?**

ಯಾವ ಕರ್ತೃವು ಆಸಕ್ತಿಯುಳ್ಳವನೂ, ಕರ್ಮಫಲದ ಇಚ್ಛೆಯುಳ್ಳವನೂ, ಲೋಭಿಯೂ, ಹಿಂಸಾ ಸ್ವಭಾವವುಳ್ಳವನೂ, ಅಶುದ್ಧ ಮತ್ತು ಹರ್ಷ - ಶೋಕಾದಿಗಳಿಂದ ಕೂಡಿರುವವನೂ ಆಗಿರುತ್ತಾನೆಯೋ, ಅವನು ರಾಜಸ ಕರ್ತೃವಾಗಿದ್ದಾನೆ. ॥೨೭॥

**ತಾಮಸ ಕರ್ತೃವು ಯಾರು ?**

ಯಾವ ಕರ್ತೃವು ಅಜಾಗರೂಕನೋ, ಕರ್ತವ್ಯ - ಅಕರ್ತವ್ಯವೆಂಬುದನ್ನು ತಿಳಿಯನೋ, ಗರ್ವಿ - ಅಹಂಕಾರಿ, ಹಟಮಾರಿ, ಕೃತಘ್ನ, ಸೋಮಾರಿ, ಶೋಕಪಡುವವ ಮತ್ತು ದೀರ್ಘಸೂತ್ರೀ (ಸ್ವಲ್ಪ ಸಮಯದಲ್ಲಿ ಆಗುವ ಕೆಲಸದಲ್ಲಿಯೂ ಹೆಚ್ಚು ಸಮಯ ಕಳೆಯುವವನು) ಆಗಿರುವನೋ ಅವನು ತಾಮಸ ಕರ್ತೃವಾಗಿದ್ದಾನೆ. ॥೨೮॥

**ಜ್ಞಾನ, ಕರ್ಮ ಮತ್ತು ಕರ್ತೃವಿನ - ಮೂರು - ಮೂರು ಭೇದಗಳನ್ನೇನೋ ನೀನು ತಿಳಿಸಿದೆ ; ಈಗ ಇವುಗಳಲ್ಲದೆ ಇನ್ನೂ ಯಾವ - ಯಾವ ಭೇದಗಳನ್ನು ತಿಳಿದುಕೊಳ್ಳಬೇಕಾದ ಆವಶ್ಯಕತೆಯಿದೆ ?**

ಎಲೈ ಧನಂಜಯ ! ಕರ್ಮಸಂಗ್ರಾಹಕ ಕರಣಗಳಲ್ಲಿ ಬುದ್ಧಿ ಮತ್ತು ಧೃತಿ (ಧಾರಣಾ ಶಕ್ತಿ) ಮುಖ್ಯವಾಗಿದೆ. ಅವುಗಳ ಭೇದಗಳನ್ನು ತಿಳಿದುಕೊಳ್ಳುವುದೂ ಬಹು ಆವಶ್ಯಕ. ಆದುದರಿಂದ ಈಗ ನೀನು ಗುಣಗಳಿಗೆ ಅನುಸಾರ ಬುದ್ಧಿ ಮತ್ತು ಧೃತಿಯ ಮೂರು ಪ್ರಕಾರದ ಭೇದಗಳನ್ನು ಬೇರೆ - ಬೇರೆ ರೂಪದಿಂದ ಕೇಳು. ಅವುಗಳನ್ನು ನಾನು ಪೂರ್ಣವಾಗಿ ಹೇಳುವೆನು. ಎಲೈ ಪೃಥಾನಂದನ ! ಯಾವ ಬುದ್ಧಿಯು ಪ್ರವೃತ್ತಿ ನಿವೃತ್ತಿ ಕರ್ತವ್ಯ ಮತ್ತು ಅಕರ್ತವ್ಯವನ್ನು, ಭಯ ಮತ್ತು ಅಭಯ ಹಾಗೂ ಬಂಧ ಮತ್ತು ಮೋಕ್ಷವನ್ನು ಸರಿಯಾಗಿ ಸ್ಪಷ್ಟವಾಗಿಯೂ ತಿಳಿದುಕೊಳ್ಳುವುದೋ ಆ ಬುದ್ಧಿಯು ಸಾತ್ತ್ವಿಕವಾದದ್ದು. ॥೨೯-೩೦॥

**ರಾಜಸೀ ಬುದ್ಧಿಯು ಯಾವುದು ?**

ಎಲೈ ಅರ್ಜುನ ! ಯಾವ ಬುದ್ಧಿಯು ಧರ್ಮ, ಅಧರ್ಮವನ್ನು, ಕರ್ತವ್ಯ, ಅಕರ್ತವ್ಯವನ್ನು - ಸರಿಯಾಗಿ ತಿಳಿಯುವುದಿಲ್ಲವೋ, ಆ ಬುದ್ಧಿ ರಾಜಸವಾದದ್ದು . ॥೩೧॥

**ತಾಮಸೀ ಬುದ್ಧಿಯು ಯಾವುದು ?**

ಎಲೈ ಪೃಥಾನಂದನ ! ತಮೋಗುಣದಿಂದ ಆವರಿಸಿರುವ ಯಾವ ಬುದ್ಧಿಯು ಧರ್ಮವನ್ನು ಅಧರ್ಮವೆಂದೂ ಮತ್ತು ಅಧರ್ಮವನ್ನು ಧರ್ಮವೆಂದೂ ಹಾಗೂ ಎಲ್ಲಾ ವಿಚಾರಗಳನ್ನೂ ವಿರುದ್ಧವಾಗಿಯೇ ತಿಳಿದುಕೊಳ್ಳುವುದೋ, ಅದು ತಾಮಸೀ ಬುದ್ಧಿಯಾಗಿದೆ. ॥೩೨॥

**ಪರಮಾತ್ಮಾ ! ಸಾತ್ತ್ವಿಕ ಧೃತಿಯು ಯಾವುದು ?**

ಎಲೈ ಪಾರ್ಥ ! ಸಮತೆಯಿಂದ ಕೂಡಿದ ಯಾವ ಅವ್ಯಭಿಚಾರಿಣೀ ಧೃತಿಯ ಮೂಲಕ ಮನುಷ್ಯನು ಮನಸ್ಸು, ಪ್ರಾಣ ಮತ್ತು ಇಂದ್ರಿಯಗಳ ಕ್ರಿಯೆಗಳನ್ನು ಧರಿಸುತ್ತಾನೋ ಆ ಧೃತಿಯು ಸಾತ್ತ್ವಿಕವಾದದ್ದು. ॥೩೩॥

**ರಾಜಸೀ ಧೃತಿಯು ಯಾವುದು ?**

ಎಲೈ ಪೃಥಾನಂದನ ! ಫಲವನ್ನು ಬಯಸುವ ಮನುಷ್ಯನು ಯಾವ ಧೃತಿಯಿಂದ ಧರ್ಮ, ಅರ್ಥ ಮತ್ತು ಕಾಮ (ಭೋಗ)ವನ್ನು ಅತ್ಯಂತ ಆಸಕ್ತಿಯಿಂದ ಧರಿಸುತ್ತಾನೋ ಆ ಧೃತಿಯು ರಾಜಸವಾದದ್ದು. ॥೩೪॥

**ತಾಮಸೀ ಧೃತಿಯು ಯಾವುದು ?**

ಹೇ ಪಾರ್ಥ ! ದುರ್ಬುದ್ಧಿಯ ಮನುಷ್ಯನು ಯಾವ ಧೃತಿಯಿಂದ ನಿದ್ರೆ, ಭಯ, ಶೋಕ (ಚಿಂತೆ), ವಿಷಾದ (ದುಃಖ) ಮತ್ತು ಮದ (ಉನ್ಮತ್ತತೆ)ವನ್ನು - ಬಿಡುವುದಿಲ್ಲವೋ; ಆ ಧೃತಿಯು ತಾಮಸವಾದದ್ದು. ॥೩೫॥

**ತಾಮಸ ಪುರುಷನು ನಿದ್ರಾದಿಗಳನ್ನು ಏಕೆ ಬಿಡುವುದಿಲ್ಲ?**

ಇವರಿಗೆ ಸುಖ ದೊರೆಯುವ ಕಾರಣದಿಂದಲೇ ಬಿಡುವುದಿಲ್ಲ.

**ಪರಮಾತ್ಮಾ ! ಆ ಸುಖವು ಯಾವುದು ?**

ಎಲೈ ಭರತಶ್ರೇಷ್ಠನೇ ! ಆ ಸುಖದಲ್ಲಿ ಇರುವ ಮೂರು ಭೇದಗಳನ್ನು ನೀನು ನನ್ನಿಂದ ಕೇಳು. ಯಾವ ಸುಖವು ಅಭ್ಯಾಸದಿಂದ ಪ್ರಿಯವಾಗುತ್ತದೆಯೋ ಮತ್ತು ಯಾವುದರಿಂದ ದುಃಖಗಳ ಅಂತ್ಯವಾಗಿ ಹೋಗುವುದೋ, ಅಂತಹ ಆ ಪರಮಾತ್ಮ ವಿಷಯದ ಬುದ್ಧಿಯ ಪ್ರಸನ್ನತೆಯಿಂದ ಉಂಟಾಗುವಂತಹ ಯಾವ ಸುಖವು ಸಾಂಸಾರಿಕ ಆಸಕ್ತಿಯ ಕಾರಣ ಪ್ರಾರಂಭದಲ್ಲಿ ವಿಷದಂತೆಯೂ ಮತ್ತು ಪರಿಣಾಮದಲ್ಲಿ ಅಮೃತದಂತೆಯೂ ಆಗುವುದೋ ಅದು ಸಾತ್ತ್ವಿಕ ಸುಖವಾಗಿದೆ. ॥೩೬-೩೭॥

**ರಾಜಸ ಸುಖವು ಯಾವುದು ?**

ಇಂದ್ರಿಯಗಳ ಮೂಲಕ ವಿಷಯಗಳ ಸಂಬಂಧದಿಂದ ಒದಗುವ ಸುಖವು

ಪ್ರಾರಂಭದಲ್ಲಿ ಅಮೃತದಂತೆಯೂ ಮತ್ತು ಪರಿಣಾಮದಲ್ಲಿ ವಿಷದಂತೆಯೂ ಕಂಡುಬರುತ್ತದೆ; ಅದು ರಾಜಸ ಸುಖವಾಗಿದೆ. ॥೩೮॥

**ತಾಮಸ ಸುಖ ಯಾವುದು ?**

ನಿದ್ರೆ, ಆಲಸ್ಯ ಮತ್ತು ಪ್ರಮಾದದಿಂದ ಉಂಟಾದ ಯಾವ ಸುಖವು ಆರಂಭದಲ್ಲಿ ಮತ್ತು ಪರಿಣಾಮದಲ್ಲಿಯೂ ಸಹ ತನ್ನನ್ನು ಮೋಹಕ್ಕೊಳಪಡಿಸುವುದೋ, ಅದು ತಾಮಸ ಸುಖವಾಗಿದೆ. ॥೩೯॥

**ಪರಮಾತ್ಮಾ ! ಮೂರು ಗುಣಗಳ ಸಂಬಂಧ ಮತ್ತು ಯಾವ - ಯಾವ ವಸ್ತುಗಳಿಗೆ ಮೂರು-ಮೂರು ಭೇದಗಳುಂಟೋ, ಅದನ್ನು ಈಗ ತಿಳಿಸು ?**

ಅಯ್ಯಾ ! ಪೃಥ್ವಿಯಲ್ಲಿ, ಸ್ವರ್ಗದಲ್ಲಿ, ದೇವತೆಗಳಲ್ಲಿ ಹಾಗೂ ಇವುಗಳೇ ಅಲ್ಲದೆ ಮತ್ತೆಲ್ಲೆಲ್ಲಿಯೂ ಸಹ ಪ್ರಕೃತಿಯಿಂದ ಉತ್ಪತ್ತಿಯಾದ ಈ ಮೂರು ಗುಣಗಳಿಂದಮುಕ್ತವಾಗಿರುವಂತಹ ಯಾವ ವಸ್ತು, ಪದಾರ್ಥ ಮತ್ತು ಪ್ರಾಣಿಯೂ ಸಹ ಇಲ್ಲ; ಅರ್ಥಾತ್ ಸಂಪೂರ್ಣವಾಗಿ ತ್ರಿಲೋಕವೂ ಮೂರು ಗುಣಗಳಲ್ಲಿಯೇ ಇದೆ. ॥೪೦॥

**ಶ್ರೀಕೃಷ್ಣ ! ಈ ಗುಣಗಳಿಂದ ಬಿಡುಗಡೆಯಾಗುವ ಉಪಾಯವೇನು ?**

ಎಲೈ ಪರಂತಪ ! ಈ ಪ್ರಪಂಚದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ - ಎಂಬ ಈ ನಾಲ್ಕು ವರ್ಣಗಳ ವಿಭಾಗವನ್ನು ಮನುಷ್ಯರ ಸ್ವಭಾವದಿಂದಲೇ ಉತ್ಪನ್ನವಾದ ಗುಣಗಳಿಗೆ ಅನುಸಾರವಾಗಿಯೇ ಮಾಡಲಾಗಿದೆ. ಆದುದರಿಂದ ತಮ್ಮ - ತಮ್ಮ ವರ್ಣಕ್ಕೆ ಅನುಸಾರವಾಗಿ ನಿಯತವಾದ ಕರ್ಮಗಳನ್ನು ಆಚರಿಸುವುದೇ ಗುಣಗಳಿಂದ ಬಿಡುಗಡೆಯಾಗುವ ಉಪಾಯವಾಗಿದೆ. ॥೪೧॥

**ಪರಮಾತ್ಮಾ ! ಬ್ರಾಹ್ಮಣರ ಕರ್ಮಗಳು ಯಾವುವು ?**

೧. ಮನೋ ನಿಗ್ರಹ, ೨. ಇಂದ್ರಿಯಗಳನ್ನು ವಶದಲ್ಲಿಟ್ಟುಕೊಳ್ಳುವುದು, ೩. ಧರ್ಮ - ಪಾಲನೆಗಾಗಿ ಕಷ್ಟಸಹಿಸುವುದು, ೪. ಬಹಿರಂಗ - ಅಂತರಂಗಗಳಲ್ಲಿ ಶುದ್ಧವಾಗಿರುವುದು, ೫. ಪರರ ಅಪರಾಧಗಳನ್ನು ಕ್ಷಮಿಸುವುದು, ೬. ಶರೀರ, ಮನಸ್ಸು ಇತ್ಯಾದಿಗಳಲ್ಲಿ ಸರಳತೆಯನ್ನು ಇಟ್ಟುಕೊಳ್ಳುವುದು, ೭. ವೇದ, ಶಾಸ್ತ್ರ ಮುಂತಾದುವುಗಳ ಜ್ಞಾನಪಡೆದುಕೊಳ್ಳುವುದು, ೮. ಯಜ್ಞವಿಧಿಯನ್ನು ಅನುಭವಕ್ಕೆ ತಂದುಕೊಳ್ಳುವುದು, ೯. ಪರಮಾತ್ಮಾ, ವೇದಾದಿಗಳಲ್ಲಿ ಆಸ್ತಿಕ ಭಾವನೆ ಇಟ್ಟುಕೊಳ್ಳುವುದು - ಇವು ಬ್ರಾಹ್ಮಣರ ಸ್ವಾಭಾವಿಕ ಕರ್ಮಗಳು. ॥೪೨॥

**ಕ್ಷತ್ರಿಯರ ಕರ್ಮಗಳು ಯಾವುವು ?**

೧. ಶೌರ್ಯ, ೨. ತೇಜಸ್ಸು ೩. ಧೈರ್ಯ, ೪. ಪ್ರಜೆಗಳ ವ್ಯವಸ್ಥೆಯೇ ಮುಂತಾದವುಗಳ ವಿಶೇಷ ಚತುರತೆ, ೫. ಯುದ್ಧದಲ್ಲಿ ಎಂದಿಗೂ ಬೆನ್ನು ತೋರಿಸದಿರುವುದು, ೬. ದಾನಕೊಡುವುದು, ೭. ಶಾಸನ ಮಾಡುವ ಭಾವ - ಇವು ಕ್ಷತ್ರಿಯರ ಸ್ವಾಭಾವಿಕ ಕರ್ಮಗಳು ॥೪೩॥

**ವೈಶ್ಯರ ಕರ್ಮಗಳು ಯಾವುವು ?**

೧. ವ್ಯವಸಾಯ ಮಾಡುವುದು, ೨. ಗೋವುಗಳನ್ನು ರಕ್ಷಿಸುವುದು, ೩. ಶುದ್ಧವಾದ ವ್ಯಾಪಾರ ಮಾಡುವುದು - ಇವು ವೈಶ್ಯರ ಸ್ವಾಭಾವಿಕ ಕರ್ಮಗಳು.

**ಶೂದ್ರರ ಕರ್ಮಗಳು ಯಾವುವು ?**

ಎಲ್ಲಾ ವರ್ಣದವರ ಸೇವೆ ಮಾಡುವುದು - ಇದು ಶೂದ್ರರ ಸ್ವಾಭಾವಿಕ ಕರ್ಮಗಳು. ॥೪೪॥

**ತಮ್ಮ - ತಮ್ಮ ಸ್ವಾಭಾವಿಕ ಕರ್ಮಗಳನ್ನು ಮಾಡುವುದರಿಂದ ಏನಾಗುತ್ತದೆ, ಭಗವಂತ ?**

ತಮ್ಮ - ತಮ್ಮ ಸ್ವಾಭಾವಿಕ ಕರ್ಮಗಳಲ್ಲಿ ನಿಷ್ಕಾಮ ಭಾವನೆಯಿಂದ ತತ್ಪರತಾಪೂರ್ವಕತೊಡಗಿರುವ ಮನುಷ್ಯನು ಪರಮಾತ್ಮನನ್ನು ಪಡೆದುಕೊಳ್ಳುತ್ತಾನೆ. ತನ್ನ ಸ್ವಾಭಾವಿಕ ಕರ್ಮಗಳಲ್ಲಿ ತತ್ಪರನಾಗಿರುವ ಮನುಷ್ಯ ಯಾವ ಪ್ರಕಾರ ಪರಮಾತ್ಮನನ್ನು ಪಡೆಯುತ್ತಾನೋ, ಆ ಪ್ರಕಾರವನ್ನು ನೀನು ನನ್ನಿಂದ ಕೇಳು. ॥೪೫॥

ಯಾವ ಪರಮಾತ್ಮನಿಂದ ಸಂಪೂರ್ಣ ಜಗತ್ತು ಸೃಷ್ಟಿಯಾಗಿದೆಯೋ ಮತ್ತು ಯಾರಿಂದ ಈ ಸಂಪೂರ್ಣ ಪ್ರಪಂಚ ವ್ಯಾಪ್ತವಾಗಿದೆಯೋ, ಆ ಪರಮಾತ್ಮನನ್ನು ತನ್ನ ಕರ್ಮಗಳ ಮೂಲಕ ಪೂಜೆ ಮಾಡಿ ಮನುಷ್ಯನು ಸಿದ್ಧಿಯನ್ನು (ಪರಮಾತ್ಮನನ್ನು) ಪಡೆಯುತ್ತಾನೆ. ॥೪೬॥

**ಪರಮಾತ್ಮಾ ! ಮನುಷ್ಯ ತನ್ನದೇ ಆದ ಕರ್ಮಗಳನ್ನು ಏಕೆ ಅನುಷ್ಠಾನ ಮಾಡಬೇಕು ?**

ಅಯ್ಯಾ ! ಯಾವುದನ್ನು ತನಗಾಗಿ ನಿಷೇಧ ಮಾಡಲಾಗಿದೆಯೋ, ಆದರೆ ಅದರಲ್ಲಿ ಬಹಳ ಗುಣಗಳಿದ್ದರೂ, ಅಂತಹ ಗುಣಯುಕ್ತ ಪರಧರ್ಮಕ್ಕಿಂತ ತನ್ನ ದೋಷಯುಕ್ತ ಧರ್ಮ (ಸ್ವಾಭಾವಿಕ ಕರ್ಮ) ಶ್ರೇಷ್ಠವಾದದ್ದು; ಏಕೆಂದರೆ ಸ್ವಭಾವದಿಂದ ನಿಶ್ಚಯಿಸಿದ ಸ್ವಧರ್ಮರೂಪೀ ಕರ್ಮವನ್ನು ಮಾಡುತ್ತಾ ಇರುವ ಮನುಷ್ಯನು ಪಾಪಕ್ಕೆ ಭಾಗಿಯಾಗುವುದಿಲ್ಲ, ಹೇ ಕುಂತೀನಂದನ ! ದೋಷಯುಕ್ತವಾದರೂ ಸಹ ತನ್ನ

ಧರ್ಮವನ್ನು ತ್ಯಾಗಮಾಡಬಾರದು. ಏಕೆಂದರೆ ಬೆಂಕಿಯನ್ನು ಉರಿಸುವ ಪ್ರಾರಂಭದಲ್ಲಿ ಹೊಗೆ ಉಂಟಾಗಿಯೇ ಆಗುತ್ತದೋ, ಅದರಂತೆಯೇ ಪ್ರತಿಯೊಂದು ಕರ್ಮದ ಆರಂಭದಲ್ಲಿ ಏನಾದರೂ ಒಂದು ದೋಷ ಇದ್ದೇ ಇರುತ್ತದೆ. ॥೪೭-೪೮॥

**ಕರ್ಮಗಳ ಆಂಶಿಕ ಮಾತ್ರವೂ ಸಹ ದೋಷವೂ ಕೂಡ ತಟ್ಟದಂತಹ ಯಾವುದಾದರೂ ಬೇರೆ ಉಪಾಯವುಂಟೇ ಪರಮಾತ್ಮಾ?**

ಹೌದು, ಸಾಂಖ್ಯಯೋಗವಿದೆ. ಯಾರ ಬುದ್ಧಿ ಎಲ್ಲಾ ಕಡೆಗಳಲ್ಲಿಯೂ, ಸರ್ವಥಾ ಆಸಕ್ತಿರಹಿತವಾಗಿರುತ್ತದೆಯೋ, ಯಾರ ಶರೀರ ವಶದಲ್ಲಿರುವುದೋ, ಯಾರಿಗೆ ಯಾವುದೇ ವಸ್ತು ಮುಂತಾದುವುಗಳ ಬಗ್ಗೆ ಕಿಂಚಿತ್ ಮಾತ್ರವೂ ಸಹ ಚಿಂತೆಯಿರುವುದಿಲ್ಲವೋ, ಅಂತಹ ಮನುಷ್ಯ ಸಾಂಖ್ಯಯೋಗದ ಮೂಲಕ ನೈಷ್ಕರ್ಮ್ಯಸಿದ್ಧಿ (ಬ್ರಹ್ಮ)ಯನ್ನು ಪಡೆಯುತ್ತಾನೆ ಅರ್ಥಾತ್ ಅವನ ಎಲ್ಲಾ ಕರ್ಮಗಳೂ ಅಕರ್ಮಗಳಾಗಿ ಹೋಗುತ್ತವೆ ಮತ್ತು ಅವನಿಗೆ ಕರ್ಮಗಳ ಆಂಶಿಕ ದೋಷ ತಟ್ಟುವುದಿಲ್ಲ. ॥೪೯॥

**ಆ ನೈಷ್ಕರ್ಮ್ಯಸಿದ್ಧಿಯನ್ನು ಪಡೆಯುವ ಕ್ರಮವೇನು?**

ಅಂತಃಕರಣದ ಶುದ್ಧಿರೂಪೀ ಸಿದ್ಧಿಯನ್ನು ಪಡೆದ ಮನುಷ್ಯನು ಜ್ಞಾನದ ಪರಾನಿಷ್ಠೆಯಾದ ಬ್ರಹ್ಮವನ್ನು, ಯಾವ ಕ್ರಮದಿಂದ ಪಡೆದುಕೊಳ್ಳುತ್ತಾನೆಯೋ, ಆ ಕ್ರಮವನ್ನು ನೀನು ನನ್ನಿಂದ ಸಂಕ್ಷೇಪವಾಗಿಯೇ ತಿಳಿದುಕೊ. ಯಾರು ಸಾತ್ತ್ವಿಕ ಬುದ್ಧಿಯುಳ್ಳವನಾಗಿ, ವೈರಾಗ್ಯವನ್ನು ಆಶ್ರಯಿಸಿ, ಏಕಾಂತದಲ್ಲಿರುವ ಸ್ವಭಾವವುಳ್ಳ ಮತ್ತು ನಿಯಮಿತ ಭೋಜನ ಮಾಡುವ ಸಾಧಕನು ಧೈರ್ಯದಿಂದ ಇಂದ್ರಿಯಗಳನ್ನು ನಿಗ್ರಹಿಸಿ, ಶರೀರ, ಮಾತು, ಮನಸ್ಸುಗಳನ್ನು ವಶಮಾಡಿಕೊಂಡು, ಶಬ್ದಾದಿ ವಿಷಯಗಳನ್ನು ತ್ಯಾಗ ಮಾಡಿ ಮತ್ತು ರಾಗ-ದ್ವೇಷಗಳನ್ನು ಬಿಟ್ಟು ನಿರಂತರ ಪರಮಾತ್ಮನ ಧ್ಯಾನದಲ್ಲಿ ತತ್ಪರನಾಗಿರುವನೋ, ಅವನು ಅಹಂಕಾರ, ಹಟ, ಗರ್ವ, ಕಾಮ, ಕ್ರೋಧ ಮತ್ತು ಪರಿಗ್ರಹ (ಭೋಗಾಸಕ್ತಿಯ ಬುದ್ಧಿಯಿಂದ ವಸ್ತುಗಳ ಸಂಗ್ರಹ) ಇತ್ಯಾದಿಯನ್ನು ತ್ಯಜಿಸಿ ಹಾಗೂ ಮಮತಾ ರಹಿತನಾಗಿ ಮತ್ತು ಶಾಂತನಾಗಿ ಬ್ರಹ್ಮಪ್ರಾಪ್ತಿಗೆ ಪ್ರಾಪ್ತನಾಗಿ ಹೋಗುತ್ತಾನೆ. ॥೫೦-೫೩॥

**ಪರಮಾತ್ಮ! ಅಂತಹ ಪಾತ್ರನಾದ ಮೇಲೆ ಏನಾಗುತ್ತದೆ?**

ಬ್ರಹ್ಮಭೂತ ಅವಸ್ಥೆಯನ್ನು ಪಡೆದ, ಪ್ರಸನ್ನ ಮನಸ್ಸಿನ ಆ ಸಾಧಕನು ಯಾರಿಗಾಗಿಯೂ ಶೋಕಪಡುವುದೂ ಇಲ್ಲ ಮತ್ತು ಯಾವುದರ ಇಚ್ಛೆಯನ್ನು ಮಾಡುವುದಿಲ್ಲ ಹಾಗೂ

ಅವನಿಗೆ ಸಮಸ್ತ ಪ್ರಾಣಿಗಳಲ್ಲಿಯೂ ಸಮಭಾವ ಉಂಟಾಗುತ್ತದೆ. ಅಂತಹ ಸಾಧಕನಿಗೆ ನನ್ನ ಪರಾಭಕ್ತಿ ಪ್ರಾಪ್ತವಾಗಿ ಹೋಗುತ್ತದೆ. ॥೫೪॥

**ಪರಾಭಕ್ತಿ ಪ್ರಾಪ್ತಿಯಾಗುವುದರಿಂದ ಏನಾಗುತ್ತದೆ?**

ಆ ಪರಾ ಭಕ್ತಿಯ ಮೂಲಕ ಅವನು ನಾನು ಏನೆಲ್ಲ ಆಗಿರುವೆನೋ, ಎಂತಹವನಾಗಿರುವೆನೋ ಮತ್ತು ಹೇಗಿದ್ದೇನೋ – ಈ ರೀತಿ ನನ್ನನ್ನು ತತ್ತ್ವದಿಂದ ತಿಳಿದುಕೊಂಡು ತತ್ಕಾಲದಲ್ಲಿಯೇ ನನ್ನಲ್ಲಿ ಪ್ರವೇಶಿಸಿಬಿಡುತ್ತಾನೆ. ॥೫೫॥

**ನಿನ್ನನ್ನು ಪಡೆದುಕೊಳ್ಳಲು ಇನ್ನೂ ಯಾವುದಾದರೂ ಉತ್ಕೃಷ್ಟ ಉಪಾಯವಿದೆಯೇ ?**

ಹೌದು, ಬಹಳ ಉತ್ಕೃಷ್ಟವಾದ ಉಪಾಯವಿದೆ.

**ಅದು ಯಾವುದು ಮಹಾಪ್ರಭು ?**

ಅನನ್ಯ ಭಾವದಿಂದ ನನ್ನ ಆಶ್ರಯ ಪಡೆದುಕೊಂಡ ಆ ಭಕ್ತನು ಸದಾ ಎಲ್ಲಾ ಕರ್ಮಗಳನ್ನು ಮಾಡುತ್ತಾ ಇದ್ದರೂ ಸಹ ನನ್ನ ಕೃಪೆಯಿಂದ ಶಾಶ್ವತವಾಗಿರುವ ಅವಿನಾಶೀ ಪರಮಪದವನ್ನು ಪಡೆಯುತ್ತಾನೆ. ॥೫೬॥

**ಹಾಗಾದರೆ ನಾನು ಏನು ಮಾಡಬೇಕು ?**

ಅಯ್ಯಾ ! ನೀನು ಕೇವಲ ನನ್ನ ಪರಾಯಣನಾಗಿ ಸಂಪೂರ್ಣವಾಗಿ ಕರ್ಮಗಳನ್ನೆಲ್ಲಾ ಮನಃಪೂರ್ವಕವಾಗಿ ನನಗೆ ಅರ್ಪಿಸಿಬಿಡು ಅರ್ಥಾತ್ ಎಲ್ಲಾ ಕರ್ಮಗಳು, ಪದಾರ್ಥಗಳು ಇತ್ಯಾದಿಗಳಿಂದ 'ನಾನು, ನನ್ನದು ಎಂಬ ಮಮತ್ವ'ವನ್ನು ತೊಲಗಿಸಿಬಿಡು ಮತ್ತು ನೀನು ಸಮತೆಯನ್ನು ಧರಿಸಿಕೊಂಡು ನಿರಂತರ ನನ್ನಲ್ಲಿಯೇ ಮನಸ್ಸುಳ್ಳವನಾಗು. ॥೫೭॥

**ನಿನ್ನಲ್ಲಿ ಮನಸ್ಸುಳ್ಳವನಾದರೆ ಏನಾಗುವುದು ?**

ನನ್ನಲ್ಲಿ ಮನಸ್ಸುಳ್ಳವನಾಗುವುದರಿಂದ ನೀನು ನನ್ನ ಕೃಪೆಯಿಂದ ಸಕಲ ವಿಘ್ನ-ಸಂಕಟಗಳನ್ನೆಲ್ಲಾ ಪರಿಹರಿಸಿಕೊಳ್ಳುವೆ. ಆದರೆ ನೀನು ಅಹಂಕಾರದ ಕಾರಣ ನನ್ನ ಮಾತನ್ನು ಕೇಳದೇ ಹೋದರೆ ನಿನ್ನ ಪತನವಾಗಿಬಿಡುವುದು. ॥೫೮॥

**ಹೇಗೆ ಪತನವಾಗುವುದು ?**

ಅಹಂಕಾರವನ್ನು ಅವಲಂಬಿಸಿ ನೀನು ಯುದ್ಧ ಮಾಡುವುದಿಲ್ಲ ಎಂದು ನಿಶ್ಚಯಮಾಡಿಕೊಂಡ, ನಿನ್ನ ಆ ನಿಶ್ಚಯವು ಸರಿಯಾದುದಲ್ಲ; ಏಕೆಂದರೆ ನಿನ್ನ ಕ್ಷಾತ್ರ ಸ್ವಭಾವವು ನಿನ್ನನ್ನು ಯುದ್ಧಕ್ಕೆ ತೊಡಗಿಸದೇ ಬಿಡದು. ಎಲೈ ಕುಂತೀನಂದನ ! ನಿನ್ನ ಸ್ವಭಾವಜನ್ಯ ಕರ್ಮದಿಂದ ಬಂಧಿತನಾದ ನೀನು ಮೋಹಪರವಶನಾದ

ಕಾರಣ ಯಾವ ಯುದ್ಧವನ್ನು ಮಾಡಲು ಇಚ್ಛಿಸುವುದಿಲ್ಲವೋ, ಅದನ್ನು ನೀನು ಕ್ಷಾತ್ರ ಸ್ವಭಾವಕ್ಕೆ ಪರವಶನಾಗಿ ಮಾಡುವೆ. ॥೫೯-೬೦॥

**ಮಹಾಪ್ರಭು ! ಆ ಕ್ಷಾತ್ರ ಸ್ವಭಾವವು ಯುದ್ಧರೂಪೀ ಕರ್ಮವನ್ನು ಹೇಗೆ ಮಾಡಿಸುವುದು ?**

ಎಲೈ ಅರ್ಜುನ ! ಅಂತರ್ಯಾಮೀ ಈಶ್ವರನು ಸಕಲ ಪ್ರಾಣಿಗಳ ಹೃದಯದಲ್ಲಿ ವಿರಾಜಿಸುತ್ತಾನೆ. ಅವನು ತನ್ನ ಮಾಯೆಯಿಂದ ಶರೀರರೂಪೀ ಯಂತ್ರವನ್ನು ಏರಿ ಎಲ್ಲಾ ಪ್ರಾಣಿಗಳನ್ನೂ ಅವುಗಳ ಸ್ವಭಾವಗಳಿಗೆ ಅನುಸಾರವಾಗಿ ಅಲೆದಾಡಿಸುತ್ತಾ ಇದ್ದಾನೆ. ॥೬೧॥

**ಪರವಶತೆಯಿಂದ ಪಾರಾಗುವ ಉಪಾಯವೇನು ?**

ಎಲೈ ಭರತವಂಶೀ ಅರ್ಜುನ ! ನೀನು ಸರ್ವ ಭಾವದಿಂದಲೂ ಆ ಅಂತರ್ಯಾಮಿ ಭಗವಂತನಲ್ಲಿಯೇ ಶರಣಾಗತನಾಗಿ ಹೋಗು. ಅವನ ಕೃಪೆಯಿಂದ ನಿನಗೆ ಪ್ರಪಂಚದಿಂದ ಸರ್ವಥಾ ಉಪರತಿ ಮತ್ತು ಅವಿನಾಶೀ ಪರಮ ಪದದ ಪ್ರಾಪ್ತಿಯೂ ಆಗಿಬಿಡುವುದು. ನಾನು ಈ ಅತ್ಯಂತ ಗೋಪ್ಯವಾದ ಶರಣಾಗತಿ ರೂಪೀ ಜ್ಞಾನವನ್ನು ನಿನಗೆ ಹೇಳಿಬಿಟ್ಟೆನು. ಈಗ ನೀನು ಇದರ ಬಗ್ಗೆ ಚೆನ್ನಾಗಿ ಯೋಚಿಸಿ ನಿನ್ನ ಇಷ್ಟ ಬಂದಂತೆ ಮಾಡು. ॥೬೨-೬೩॥

**ಪರಮಾತ್ಮಾ ! ನಾನು ನನ್ನ ಇಚ್ಛೆಯಂತೆ ಏನು ಮಾಡಲೂ ಬಯಸುವುದಿಲ್ಲ. ನಾನು ಏನು ಮಾಡಲಿ ಎಂಬುದನ್ನು ನೀನೇ ತಿಳಿಸು ?**

ಹಾಗಾದರೆ ನೀನು ನನ್ನ ಈ ಅತ್ಯಂತ ಗೋಪ್ಯವಾದ ಪರಮ ವಚನವನ್ನು ಪುನಃ ಕೇಳು. ನೀನು ನನಗೆ ಅತ್ಯಂತ ಪ್ರೀತಿ ಪಾತ್ರನು. ಆದುದರಿಂದ ನಾನು ನಿನ್ನ ಹಿತದ ಮಾತನ್ನು ಹೇಳುವೆನು. ॥೬೪॥

**ಆ ಹಿತದ ಮಾತು ಯಾವುದು ಶ್ರೀಕೃಷ್ಣ?**

ನೀನು ನನ್ನ ಭಕ್ತನಾಗು, ನನ್ನಲ್ಲಿಯೇ ಮನಸ್ಸುಳ್ಳವನಾಗು, ನನ್ನ ಪೂಜೆಯನ್ನು ಮಾಡು ಮತ್ತು ನನಗೇ ನಮಸ್ಕಾರ ಮಾಡು. ಹೀಗೆ ಮಾಡುವುದರಿಂದ ನೀನು ನನ್ನನ್ನೇ ಪಡೆಯುವೆ - ಇದನ್ನು ನಾನು ನಿನ್ನ ಮುಂದೆ ಸತ್ಯವಾಗಿ ಪ್ರತಿಜ್ಞಾಪೂರ್ವಕ ಹೇಳುತ್ತಿದ್ದೇನೆ; ಏಕೆಂದರೆ ನೀನು ನನಗೆ ಅತ್ಯಂತ ಪ್ರಿಯನಾಗಿರುವೆ. ॥೬೫॥

**ಪರಮಾತ್ಮಾ ! ಒಂದು ವೇಳೆ ನಾನು ಹಾಗೆ ಮಾಡಲಾರದೇ ಹೋದರೆ ?**

ಸಂಪೂರ್ಣವಾಗಿ ಧರ್ಮಗಳ ಆಶ್ರಯವನ್ನು ಬಿಟ್ಟು ನೀನು ಕೇವಲ ಓರ್ವ

ನನ್ನಲ್ಲಿಯೇ ಶರಣಾಗತನಾಗು. ನಾನು ಸಂಪೂರ್ಣವಾಗಿ ಎಲ್ಲಾ ಪಾಪಗಳಿಂದ ನಿನ್ನನ್ನು ಮುಕ್ತಗೊಳಿಸಿಬಿಡುವೆನು. ನೀನು ಚಿಂತೆ ಮಾಡಬೇಡ. ॥೬೬॥

**ನೀನು ಬಹಳ ಸುಗಮವಾದ ಮತ್ತು ಅತ್ಯುತ್ಕೃಷ್ಟವಾದ ವಿಚಾರವನ್ನು ತಿಳಿಸಿದೆ, ಪರಮಾತ್ಮಾ ! ಈ ವಿಚಾರವನ್ನು ನಾನು ಎಲ್ಲರಿಗೂ ಹೇಳಬಹುದೇ ?**

ಕೂಡದು - ಕೂಡದು, ಈ ಅತ್ಯಂತ ರಹಸ್ಯಮಯ ವಿಚಾರವನ್ನು ಸಹಿಷ್ಣುತೆಯಿಲ್ಲದೆ ಮನುಷ್ಯನಿಗೆ ಹೇಳಕೂಡದು; ನನ್ನ ಭಕ್ತನಲ್ಲದವನಿಗೂ ಸಹ ಎಂದಿಗೂ ಹೇಳಬಾರದು; ಯಾರು ಈ ವಿಚಾರವನ್ನು (ಗೀತಾರೂಪೀ ವಚನ) ಕೇಳಲು ಬಯಸುವುದಿಲ್ಲವೋ, ಅವನಿಗೂ ಸಹ ಹೇಳಬೇಡ ಮತ್ತು ನನ್ನಲ್ಲಿ ದೋಷದೃಷ್ಟಿ ಇಟ್ಟುಕೊಂಡಿರುವವನಿಗೂ ಸಹ ಹೇಳಬೇಡ. ॥೬೭॥

**ಆದರೆ ಇದಲ್ಲದೆ ನೀನು ಹೇಳಿರುವ ಇನ್ನಿತರ ವಿಚಾರಗಳನ್ನು ಯಾರಿಗೆ ಹೇಳಬೇಕು ?**

ನನ್ನ ಭಕ್ತರಿಗೆ ಹೇಳಬೇಕು. ಯಾರು ನನ್ನ ಭಕ್ತಿಯ ಉದ್ದೇಶದಿಂದ ಈ ಪರಮರಹಸ್ಯಮಯ ಗೀತಾ-ಗ್ರಂಥವನ್ನು ನನ್ನ ಭಕ್ತರಿಗೆ ಹೇಳುವನೋ, ಅವನು ನಿಃಸಂದೇಹವಾಗಿ ನನ್ನನ್ನೇ ಪಡೆದುಕೊಳ್ಳುವನು. ಇಷ್ಟೇ ಅಲ್ಲ, ಅವನಿಗೆ ಸಮಾನರಾದ ನನ್ನ ಅತ್ಯಂತ ಪ್ರಿಯಕಾರ್ಯವನ್ನು ಮಾಡುವವನೂ ಸಹ ಮನುಷ್ಯರಲ್ಲಿ ಯಾರೂ ಇರಲಾರರು ಮತ್ತು ಭೂಮಂಡಲದಲ್ಲಿ ಅವನಿಗೆ ಸಮಾನವಾದ ನನ್ನ ಪ್ರೀತಿಗೆ ಪಾತ್ರರಾದವರು ಯಾರೂ ಸಹ ಇರಲಾರರು. ॥೬೮-೬೯॥

**ಯಾರಾದರೂ ಇಂತಹ ಕಾರ್ಯವನ್ನು ಮಾಡಲಾರದೇ ಹೋದರೇ ?**

ಯಾರು ನನ್ನ ಮತ್ತು ನಿನ್ನ ಈ ಧರ್ಮಮಯ ಸಂವಾದದ ಅಧ್ಯಯನ ಮಾಡುವನೋ, ಅವನ ಮೂಲಕ ನಾನು ಜ್ಞಾನಯಜ್ಞದಿಂದ ಪೂಜಿತನಾಗುವೆನು - ಎಂಬುದೇ ನನ್ನ ಅಭಿಪ್ರಾಯವಾಗಿದೆ. ॥೭೦॥

**ಶ್ರೀಕೃಷ್ಣ ! ಯಾರಾದರೂ ಅಧ್ಯಯನ ಮಾಡಲಾಗದಿದ್ದರೆ ?**

ದೋಷರಹಿತನಾದ ಯಾವ ಮನುಷ್ಯಕೇವಲ ಶ್ರದ್ಧಾಪೂರ್ವಕ ನನ್ನ ಈ ಉಪದೇಶವನ್ನು ಕೇಳುವನೋ, ಅವನೂ ಸಹ ಸಂಪೂರ್ಣವಾಗಿ ಪಾಪಗಳಿಂದ ಮುಕ್ತನಾಗಿ ಪುಣ್ಯವಂತರ ಶ್ರೇಷ್ಠ ಲೋಕಗಳನ್ನು ಪಡೆದುಕೊಳ್ಳುವನು. ॥೭೧॥

**ಎಲೈ ಪಾರ್ಥ ! ನೀನು ಈ ಉಪದೇಶವನ್ನು ಏಕಾಗ್ರಚಿತ್ತದಿಂದ ಕೇಳಿದೆಯಾ ?**

ಮತ್ತು ಎಲೈ ಧನಂಜಯ ! ನಿನ್ನ ಅಜ್ಞಾನದಿಂದ ಉಂಟಾಗಿದ್ದ ಮೋಹ ನಾಶವಾಯಿತೇ? ಇದನ್ನು ನಿನ್ನಿಂದ ತಿಳಿದುಕೊಳ್ಳಲು ಇಚ್ಛಿಸುತ್ತೇನೆ. ॥೭೨॥

ಅರ್ಜುನ ಹೇಳಿದನು - ಹೇ ಅಚ್ಯುತ ! ನನ್ನ ಮೋಹ ನಾಶವಾಗಿ ಹೋಯಿತು ಮತ್ತು ಸ್ಮೃತಿಯು ಪ್ರಾಪ್ತವಾಗಿ ಹೋಗಿದೆ. ಆದರೆ ಇದೆಲ್ಲವೂ ಆಗಿರುವುದು ನಿನ್ನ ಕೃಪೆಯಿಂದ ಉಪದೇಶ ಕೇಳಿದುದರಿಂದ ಅಲ್ಲ! ನಾನು ಸಂದೇಹವಿಲ್ಲದವನಾಗಿದ್ದೇನೆ. ಈಗ ನಾನು ನಿನ್ನ ಆಜ್ಞೆಯನ್ನು ಪರಿಪಾಲಿಸುವೆನು. ॥೭೩॥

ಸಂಜಯ ಹೇಳಿದನು - ಓ ಮಹಾರಾಜ ! ಈ ಪ್ರಕಾರ ನಾನು ಪರಮಾತ್ಮಾ ವಾಸುದೇವ ಮತ್ತು ಮಹಾತ್ಮಾ ಅರ್ಜುನನ ಈ ರೋಮಾಂಚಕಾರೀ ಅದ್ಭುತ ಸಂವಾದವನ್ನು ಕೇಳಿದೆನು. ॥೭೪॥

**ಸಂಜಯ ! ಈ ಸಂವಾದವನ್ನು ನೀನು ಕೇಳಲು ಹೇಗೆ ಅವಕಾಶವಾಯಿತು ?**

ಈ ಅತ್ಯಂತ ರಹಸ್ಯಮಯ ಸಂವಾದವನ್ನು ನಾನು ವ್ಯಾಸರ ಕೃಪೆಯಿಂದ ಸಾಕ್ಷಾತ್ ಯೋಗೇಶ್ವರ ಭಗವಾನ್ ಶ್ರೀಕೃಷ್ಣನು ಹೇಳುತ್ತಾ ಇರುವಾಗಲೇ ಕೇಳಿದ್ದೇನೆ, ಪರಂಪರೆಯಿಂದ ಅಲ್ಲ. ॥೭೫॥

**ಸಂಜಯ ! ಈ ಸಂವಾದವನ್ನು ಕೇಳಿದುದರಿಂದ ನಿನ್ನ ಮೇಲೆ ಏನು ಪರಿಣಾಮ ಉಂಟಾಯಿತು ?**

ಎಲೈ ಮಹಾರಾಜ ! ಪರಮಾತ್ಮಾ ಶ್ರೀಕೃಷ್ಣ ಮತ್ತು ಅರ್ಜುನರ ಈ ಪವಿತ್ರ ಮತ್ತು ಅದ್ಭುತ ಸಂವಾದವನ್ನು ಜ್ಞಾಪಿಸಿಕೊಂಡು - ನಾನು ಪುನಃ ಪುನಃ ಹರ್ಷಿತನಾಗುತ್ತಿದ್ದೇನೆ. ॥೭೬॥

**ಹರ್ಷಪಡಲು ಇನ್ನೇನು ಕಾರಣವಿದೆ ?**

ಎಲೈ ಮಹಾರಾಜ ! ಪರಮಾತ್ಮಾ ಶ್ರೀಕೃಷ್ಣನ ಆ ಅತ್ಯಂತ ಅದ್ಭುತ ವಿರಾಟ್ ರೂಪವನ್ನು ಜ್ಞಾಪಿಸಿ-ಜ್ಞಾಪಿಸಿಕೊಂಡು ನನಗೆ ಬಹಳ ಆಶ್ಚರ್ಯವಾಗುತ್ತಾ ಇದೆ ಮತ್ತು ನಾನು ಪದೇ ಪದೇ ಆನಂದ ಪಡುತ್ತಿದ್ದೇನೆ. ॥೭೭॥

**ಸಂಜಯ ! ಈಗ ನೀನು ಯಾವ ತೀರ್ಮಾನಕ್ಕೆ ಬಂದಿರುವೆ ?**

ಎಲ್ಲಿ ಯೋಗೇಶ್ವರ ಭಗವಾನ್ ಶ್ರೀಕೃಷ್ಣನಿರುತ್ತಾನೋ ಮತ್ತು ಎಲ್ಲಿ ಗಾಂಡೀವ-ಧನುರ್ಧಾರೀ ಅರ್ಜುನನಿದ್ದಾನೆಯೋ, ಅಲ್ಲಿಯೇ ಶ್ರೀ, ವಿಜಯ, ವಿಭೂತಿ ಮತ್ತು ಅಚಲ ನೀತಿ ಇರುತ್ತದೆ - ಇದೇ ನನ್ನ ನಿಶ್ಚಯ ತೀರ್ಮಾನವಾಗಿದೆ. ॥೭೮॥

❑❑

**ಸೂಚನೆ :** ಈ ಗೀತಾ ಮಾಧುರ್ಯವನ್ನು ಸರಿಯಾಗಿ ತಿಳಿದುಕೊಳ್ಳಲು ಜಿಜ್ಞಾಸು ಓದುಗರು ಗೀತಾಪ್ರೆಸ್ಸಿನಿಂದ ಪ್ರಕಟಿತವಾದ ಶ್ರೀಮದ್ಭಗವದ್ಗೀತೆಯ ''ಸಾಧಕ ಸಂಜೀವನೀ'' ಟೀಕೆಯನ್ನು ನೋಡಬೇಕು.

# ಆರತಿ

ಜಯ ಭಗವದ್ಗೀತೆ, ಜಯ ಭಗವದ್ಗೀತೆ ।
ಹರಿ-ಹಿಯ-ಕಮಲ-ವಿಹಾರಿಣಿ, ಸುಂದರ ಸುಪುನೀತೆ ॥ ಜಯ ॥

ಕರ್ಮ - ಸುಮರ್ಮ - ಪ್ರಕಾಶಿನಿ, ಕಾಮಾಸಕ್ತಿಹರಾ ।
ತತ್ತ್ವಜ್ಞಾನ - ವಿಕಾಶಿನಿ, ವಿದ್ಯಾ ಬ್ರಹ್ಮ ಪರಾ ॥ ಜಯ ॥

ನಿಶ್ಚಲ-ಭಕ್ತಿ-ವಿದಾಯಿನಿ, ನಿರ್ಮಲ ಮಲಹಾರೀ ।
ಶರಣ-ರಹಸ್ಯ-ಪ್ರದಾಯಿನಿ, ಸಬ ವಿಧಿ ಸುಖಕಾರೀ ॥ ಜಯ ॥

ರಾಗ - ದ್ವೇಷ - ವಿದಾರಿಣಿ, ಕಾರಿಣಿ ಮೋದ ಸದಾ ।
ಭವ-ಭಯ-ಹಾರಿಣಿ ತಾರಿಣಿ, ಪರಮಾನಂದಪ್ರದಾ ॥ ಜಯ ॥

ಆಸುರ-ಭಾವ-ವಿನಾಶಿನಿ, ನಾಶಿನಿ ತಮ-ರಜನೀ ।
ದೈವೀ ಸದ್ಗುಣದಾಯಿನಿ, ಹರಿ ರಸಿಕಾ ಸಜನೀ ॥ ಜಯ ॥

ಸಮತಾ, ತ್ಯಾಗ ಸಿಖಾವನಿ, ಹರಿ-ಮುಖಕೀ ಬಾನೀ ।
ಸಕಲ ಶಾಸ್ತ್ರಕೀ ಸ್ವಾಮಿನಿ, ಶ್ರುತಿಯೋಂಕಿ ರಾನೀ ॥ ಜಯ ॥

ದಯಾ-ಸುಧಾ ಬರಸಾವನಿ ಮಾತು ಕೃಪಾ ಕೀಜೈ ।
ಹರಿ-ಪದ-ಪ್ರೇಮ ದಾನ ಕರ ಅಪನೋ ಕರ ಲೀಜೈ ॥ ಜಯ ॥